ಕಲ್ಪನಾ ಗ್ರಂಥಮಾಲಾ-೪

# 'ರಾಜಾ ರಾಣಿ ದೇಖೋ'!

ತಿರುಮಲ್ಲೂರ ಕಾರ್ಟನ್



ಕಲ್ಪನಾ
ಗ್ರಂಥ ಪ್ರಕಾಶನ ಸಮಿತಿ, ಹುಬ್ಬಳ್ಳಿ

೧೯೪೯ ಬೆಲೆ : ೧-೮-೦

# To
# A Hero Stone

( ನನ್ನ ಊರ ಶಾಲೆಯ ಸಹಪಾಠಿಗಳ ಅಪ್ಪಣೆಯ ಮೇರೆಗೆ )

**ತಾಯಿ ಕೊಟ್ಟ ಹರಕೆ**

ಮಕ್ಕಳ ತಾಯವ್ವ ಕೆಟ್ಟೆನೆನ್ನಲು ಬೇಡ
ಪಕ್ಷಿಜಾತ್ಯಾಗ ಗರುಡನು ಹುಟ್ಟಿದರ
ತಮ್ಮವ್ನ ಸೆರೆಯ ಬಿಡಿಸ್ಯಾನ

ಹಣೆಯ ಬರಹದ ಗೆರೆಯು ಹರೆದರು ತಪ್ಪದು
ಹರಿಚಂದರಾಯ ಸುಡುಗಾಡ ಸೇರಿದರ
ಇವಿಯವನ ಬೆನ್ನ ಬಿಡಲಿಲ್ಲ

# ಮುನ್ನುಡಿ

‘ವಿಷ ನಿಮಿಷಗಳು’, ‘ಹಾಲಾಹಲ’ ಮೊದಲಾದ ಕೃತಿಗಳಿಂದ ಕನ್ನಡ ನಾಡಿಗೆ ಸುಪರಿಚಿತರಾದ ಶ್ರೀ ಪಿರ್ಕೆಮ್ಮೂರ ಈಶ್ವರನ್‌ರವರು ಈಗ ‘ರಾಜಾ ರಾಣಿ ಡೇಖೋ’ ಎಂಬ ನೂತನ ಕೃತಿಯನ್ನು ನಾಡಿನ ಜನತೆಗೆ ಅರ್ಪಿಸಿದ್ದಾರೆ. ಅವರು ಕಲ್ಪನೆಗೆ ಬರೆಯುವ ಕಾಗದಗಳಂತೆ ಕಲ್ಪನಾ ಗ್ರಂಥಮಾಲೆಯಲ್ಲಿಯೂ ಅವರ ಕೃತಿಗಳು ಬರತೊಡಗಿವೆ. ನನ್ನ ತರುಣ ಸಾಹಿತಿ ಮಿತ್ರರ ಈ ಕೃತಿಯನ್ನು ನಾನು ಪ್ರೀತಿಯಿಂದ ಸ್ವಾಗತಿಸುತ್ತೇನೆ.

ಈಶ್ವರನ್‌ರ ಸ್ಫೂರ್ತಿ ಗಂಗೆಯಲ್ಲಿ ಅನೇಕ ಸೆಲೆಗಳು ಬೆರೆತಿವೆ ನಿಯತಿ ತಂದ ನೋವಿನ ಆಳವಾದ ಅನುಭವ, ಅಪೂರ್ಣ ಜಗತ್ತು ಸಮಾಜಗಳಲ್ಲಿ ತಾಂಡವಿಸುವ ದುಃಖದ ಆಕ್ರೋಶ, ಅದನ್ನು ಕಂಡು ಕರಗುವ ಹೃದಯದ ಕರುಣೆ, ತೊಳಲುವ ಮನಸಿನ ಸಹಾನುಭೂತಿ, ಈ ನೋವನ್ನೂ ಕರುಣೆಯನ್ನೂ ಕೂಡಿಯೇ ವ್ಯಕ್ತ್ಯತೀತವಾಗಿ ಕಾಣುವ ನಿರ್ಲಿಪ್ತತೆ,— ಇವೆಲ್ಲ ಗುಣಗಳು ಅವರ ಅಂತಃಪ್ರಜ್ಞೆಯಲ್ಲಿ ಬೆರೆತುಕೊಂಡಿವೆ. ಅವರ ಕೃತಿಗಳ ಉಗಮಸ್ಥಾನ ಈ ಗುಣಗಳ ಸಂಗಮದಲ್ಲಿದೆ. ‘ರಾಜಾ ರಾಣಿ ಡೇಖೋ’ ಎಂಬುದು ಒಂದು ಉತ್ತಮ ಭಾವನಾ ಚಿತ್ರ. ಒಂದು ಮೋಹಕ ರೂಪಕವಾಗಿ ಈ ನಿರ್ಲಿಪ್ತತೆಯು ಅದರಲ್ಲಿ ತಲೆಯೆತ್ತಿದೆ. ‘ಕಾಬೂಲಿವಾಲಾ’ ಸಾಮ್ಯದ ಬಳಕೆ ಆ ಚಿತ್ರಕ್ಕೆ ರಸದ ತಿರುಳನ್ನು ಒದಗಿಸುತ್ತದೆ. ವ್ಯಕ್ತ್ಯತೀತವಾಗಿ ಜೀವನವನ್ನು ನೋಡುವ ನೋಟವೇ ರಸ, ಆನಂದ. ಅವರ ‘ವಿಷ-ನಿಮಿಷಗಳ’ಲ್ಲಿಯೂ ಇಲ್ಲಿಯ ಚಿತ್ರಗಳಲ್ಲಿಯೂ ಈ ರಸವೇ ಗುಪ್ತ

ಗಂಗೆಯಾಗಿ ಹರಿಯುತ್ತಿದೆ. ಈಶ್ವರನ್‌ರು ಚಿತ್ರಿಸಿದ ನೋವು-ಕರುಣೆಗಳೊಳಗಿಂದ ಹರಿದು ಈ ರಸವೇ ಓದುಗರನ್ನು ತಣಿಸುತ್ತದೆ.

ಈ ರಸವನ್ನು ಒದಗಿಸುವ ಕಬ್ಬಿನ ಗಣೆಗಳೇ ಅವರು ಕಂಡ ಜೀವನದ ಸನ್ನಿವೇಶಗಳು. ೧೯೪೨ರ ಕ್ರಾಂತಿಯ ಫಲವತ್ತಾದ ಕ್ಷೇತ್ರದಿಂದ ಲೇಖಕರು ಅವುಗಳನ್ನು ಪಡೆದಿದ್ದಾರೆ. ಇಂಥ ಆಯ್ಕೆ-ಯಿಂದ ಕಾವ್ಯ ಶರೀರಕ್ಕೆ ಬರುವ ಕಾಂತಿಯನ್ನೇ ನಾವು ‘ಪ್ರಗತಿ’ ‘ಅಭ್ಯುದಯ’ ಎಂದು ಕರೆಯುತ್ತೇವೆ. ಆ ಅರ್ಥದಲ್ಲಿ ಈ ಕೃತಿಯೂ ಪ್ರಗತಿಪರ ಸಾಹಿತ್ಯವಾಗಿದೆ. ಹಿರೇಮುಲ್ಲೂರ ವ್ಯಕ್ತಿಗಳು ಕೆಲವರು ಈ ಕ್ರಾಂತಿಯನ್ನು ಹೇಗೆ ಕಂಡು ಉಂಡರು? ಅಲ್ಲಿಯ ಕುಂಬಾರ ಮಲ್ಲಪ್ಪ ರಾಷ್ಟ್ರದ ಸ್ವಾತಂತ್ರ್ಯವನ್ನು ಹೇಗೆ ಸ್ವಾಗತಿಸಿದ? ನೈಲಾರ ಮಹದೇವಪ್ಪನನ್ನು ಒಮ್ಮೆ ಕಾಡಿನಲ್ಲಿ ಕಂಡ ಜೀತಗಾರ ಮೂಕಾ ಹೇಗೆ ಹೊಸ ನೋಟವನ್ನು ಪಡೆದ? ವೀರಣ್ಣನಂಥ ವಿದ್ಯಾರ್ಥಿಗಳೂ, ಸಿಂಗಪ್ಪನವರಂಥ ಶಿಕ್ಷಕರೂ, ರಾಮಣ್ಣನಂಥ ಅಂಚೆಯಾಳುಗಳೂ, ಬೋಲಾನಂಥ ಓಲೆಕಾರರೂ, ಸತ್ಯಪ್ಪನಂಥ ಗುಳೇಕಾರರೂ ಆಗ ಇಲ್ಲವೆ ಮುಂದೆ ಬಂದ ಪರೀಕ್ಷಾ ಸಮಯ-ಗಳಲ್ಲಿ ಎಂಥ ದುಃಖಗಳನ್ನು ಅನುಭವಿಸಿದರು? ಹೀಗೆ ಒಂದು ನಿರ್ದಿಷ್ಟ ಕಾಲ ಪರಿಸ್ಥಿತಿಯನ್ನು ಹೊಂದಿಕೊಂಡು ನಿಂತ ಜೀವನದಲ್ಲಿಯ ದುಃಖವನ್ನೂ ಪುರುಷಾರ್ಥವನ್ನೂ ಈಶ್ವರನ್‌ರು ತೋರಿಸುತ್ತಾರೆ. ಇಂದಿನ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಗೊರೂರರವರ ಮಲ್ಲಿಗೆಹಳ್ಳಿ ಮೃದು ಹಾಸ್ಯದ ತವರೂರಾದರೆ ಹಿರೇಮುಲ್ಲೂರು ಕರುಣೆ — ಸಹಾನುಭೂತಿಗಳ ತವರೂರಾಗಿದೆ. ಅಷ್ಟು ಪ್ರೀತಿಯಿಂದ ಈಶ್ವರನ್‌ರು ಹಿರೇಮುಲ್ಲೂರಿನ ಬಗ್ಗೆ ಬರೆದಿದ್ದಾರೆ. ಜೀವನವು ಅನಂತ. ಅದನ್ನು ಒಂದು ವಿಶಿಷ್ಟ ಪರಿಸ್ಥಿತಿಗೆ ಹೊಂದಿಸಿ ಸಾಹಿತಿಯು ಚಿತ್ರಿಸುತ್ತಾನೆ. ‘ವಿಷನಿಮಿಷಗಳ’ ರಮ್ಯತೆ ಇಲ್ಲಿ ಕೊಂಚ ಕಡಿಮೆಯಾಗಿದೆಯೆಂದು ತೋರಿದ್ದರೆ ಸನ್ನಿವೇಶಗಳ ಆಯ್ಕೆ ಇಲ್ಲಿ ಒಂದು ವಿಶಿಷ್ಟ ಕಾಲಾವಧಿಯದು, ಪರಿಸ್ಥಿತಿಯದು, ಸ್ವಚ್ಛಂದವಲ್ಲವೆಂಬುದನ್ನು ನಾವು ನೆನೆಯಬೇಕು.

ಈ ಜೀವನ ದೃಷ್ಟಿಯ ಭೌತಿಕ ಹಿನ್ನೆಲೆ ಅಲ್ಲಲ್ಲಿ ಸೂಚಿತ ವಾಗಿದೆ. ಕಾರ್ಮಿಕರ ಗೋಳು, ಅವರನ್ನು ಸಂಜೀವಿಸಬಲ್ಲ ಸಮತಾವಾದದ ಸಮರ್ಥನೆ,— ಇವು ಅಲ್ಲಲ್ಲಿ ತಲೆಯೆತ್ತಿವೆ. ಆದರೆ ಕಾರ್ಮಿಕರ ಜೀವನದಲ್ಲಿ ಸಿದ್ಧಾಂತಕ್ಕಿಂತ ಸಿದ್ಧಿಗೇ ಹೆಚ್ಚು ಪ್ರಾಶಸ್ತ್ಯ. ತತ್ತ್ವ ವಿವೇಚನೆಗಿಂತ ಜೀವನ ಚಿತ್ರಣವೇ ಇಲ್ಲಿ ಮುಖ್ಯವಾಗಿದೆ.

ಈ ಅನುಭವವನ್ನು ನಿರೂಪಿಸುವ ಈಶ್ವರನ್‌ರ ಶೈಲಿಯಲ್ಲಿ ಒಂದು ಸೌಕುಮಾರ್ಯ ಇಲ್ಲವೆ ಮಾಧುರ್ಯವಿದೆ ಆ ಶೈಲಿಯ ಮಾರ್ದವ ಓದುಗರಿಗೆ ಈಗಾಗಲೆ ಪರಿಚಿತವಾಗಿದೆ. 'ರಾಜಾ ರಾಣಿ ಪೇಖೋ'ದ ಶೈಲಿಯಲ್ಲಿ ಮಾಧುರ್ಯದೊಡನೆ ಓಜಸ್ಸೂ ಬೆರೆತಿದೆ. ಏಕೆಂದರೆ ಆ ಕೃತಿಯ ಉಗಮದಲ್ಲಿಯೇ 'ಆಪ್' ಹಾಗೂ 'ತೇಜ' ಗಳ ಮಿಲನವಿದೆ

ಶ್ರೀ ಈಶ್ವರನ್‌ರ ಜೀವನ ದೃಷ್ಟಿ ಹೀಗೆಯೇ ಬೆಳೆಯಲಿ. ಅವರ ಸಾಹಿತ್ಯ ಸೃಷ್ಟಿ ಸಾಹಿತ್ಯದ ಪಂಚ ಭೂತಗಳನ್ನು ಸಂಚಯಿಸಿಕೊಂಡ ಉಜ್ವಲ ಸೃಷ್ಟಿಯಾಗಲಿ.

ವೀಸನಗರ
(ಉತ್ತರ ಗುಜರಾಥ)
ಸಂಕ್ರಾಂತಿ ೧೪-೧-೧೯೫೯



ವಿ. ಕೃ. ಗೋಕಾಕ

೭

# ಎರಡು ಓಲೆಗಳು

[೧]

ಪ್ರಿಯ ವಿ. ಕೃ. ಗೋಕಾಕ,

ಕೆಲವು ಕಾಲದ ಹಿಂದೆ ನೀವೊಮ್ಮೆ ಬೆಳಗಾಂವಿಗೆ ಬಂದಾಗ ಹಿರೇಮುಲ್ಲೂರಿನ ಹುಡುಗನೊಬ್ಬ ನಿಮ್ಮನ್ನು ಕಂಡು ನಮಸ್ಕಾರ ಮಾಡಿ ಸ್ನೇಹ ವಿಶ್ವಾಸಗಳೊಂದಿಗೆ ಮಾತನಾಡಿದ ಸಂದರ್ಭವನ್ನು ನೀವು ಮರೆತಿಲ್ಲವಷ್ಟೇ? ಅವನು ಬರೆದ 'ರಾಜಾ ರಾಣಿ ದೇಖೋ!'ಕ್ಕೆ ನಾಲ್ಕು ಒಲವಿನ ನುಡಿಗಳನ್ನು 'ಮುನ್ನುಡಿ'ಯಾಗಿ ಬರೆಯಬೇಕೆಂದು ನಿಮ್ಮನ್ನು ಕೇಳಿಕೊಂಡುದು, ನೀವು ಅದಕ್ಕೆ ಒಪ್ಪಿದುದು ಇನ್ನೂ ನಿಮ್ಮ ಸ್ಮೃತಿ ಪಥದಿಂದ ದೂರವಾಗಿಲ್ಲವಷ್ಟೇ? ಬಹುಶಃ ನೀವು ಮರೆತಿರಬೇಕು. ಅದೆಲ್ಲ ನಿಮ್ಮ ನೆನಪಿನಿಂದ ದೂರವಾಗಿರಬೇಕು. ಅದು ನಾವು ಮಾಡಿದ ತಪ್ಪು! ನಿಮ್ಮನ್ನು ನಾವು ಈ ನಾಡು ಬಿಟ್ಟು ಇನ್ನೊಂದು ನಾಡಿಗೆ, ಕನ್ನಡ ನಾಡಿನಿಂದ ಉತ್ತರ ಗುಜರಾಥದ ವೀಸನಗರಕ್ಕೆ ಕಳುಹಿಸಿದೆವು! ಎಷ್ಟು ದೂರದ ನಾಡೋ, ಹಿರೇಮುಲ್ಲೂರಿನಿಂದ ವೀಸನಗರ ಎಷ್ಟು ಮೈಲಿನ ದಾರಿಯೋ!

'ರಾಜಾ ರಾಣಿ ದೇಖೋ!' ನಮ್ಮ ಕಲ್ಪನೆಯ ಮುದ್ದು ಕೂಸು. ೧೯೪೨ನೆಯ ಆಗಸ್ಟ ಕ್ರಾಂತಿಯ ಮಟ ಮಟ ಮಧ್ಯಾಹ್ನದಲ್ಲಿ ಹಿರೇಮುಲ್ಲೂರಿನಲ್ಲಿ ಈ ಕೂಸಿನ ಜನುಮವಾಯಿತು. ಆಗ ಇನ್ನೂ ಇದ್ದ ಕುಂಬಾರ ಮಲ್ಲಪ್ಪ, ಪೋಸ್ಟಮನ್ ರಾಮಣ್ಣ ........... ಮೊದಲಾದವರು ಕೂಸನ್ನು ನೋಡಲು ಬಂದು ಹೆಸರಿಟ್ಟು ಹೋದರು! ಮಗು ನನ್ನನ್ನೇ ಹೋಲುತ್ತಿದೆಯಂತೆ! ಅದಕ್ಕೆ ದುಃಖದಲ್ಲಿಯೇ ಸುಖವಂತೆ! ಸಾವಿನಲ್ಲಿಯೇ ಸರಸವಂತೆ! ಸುಖ ದುಃಖ ಸಂಗಮವಾದ ಹೃದ್ರಂಗವೇ ವಾಸನವಂತೆ!

ರಾಜಾ ರಾಣಿ ದೇಖೋ, ಪೋಸ್ಟಮನ್ ರಾಮಣ್ಣ, ನಿಂಗಪ್ಪ ಮಾಸ್ತರು ಚಿತ್ರಕಾರ ಬೋಳಾ........ ಒಬ್ಬರೇ ಇಬ್ಬರೇ! ನಾಡಿನ ಮೂಲೆ ಮೂಲೆಗಳಲ್ಲಿ ಗುಡಿ ಗುಂಡಾರಗಳಲ್ಲಿ, ಕಂಟಿ ಕೊಂಪೆಗಳಲ್ಲಿ ವಾಸ ಮಾಡಿಕೊಂಡ ಈ ದೀನ ದುಃಖೀ ಜನತೆ 'ಮೇಲಿನವರ' ಕೈಯಲ್ಲಿ ಸಿಕ್ಕು ಹಾಕಿದ ಕಣ್ಣೀರು ನಾವು

ನೆನೆಯಬಾರದು ! ಕಣ್ಣಿನಿಂದ ಉಪ್ಪು ನೀರು ಪಳ ಪಳ ಉದುರುತ್ತಿರುವ ಅವರ ಮೊಗಗಳ ರೇಖಾ ಚಿತ್ರ ಇದಿರಿಗೆ ಬಂದು ನಿಂತಾಗ ನನಗೆ ಬ್ಲೇಕ್ ಕವಿ, ವಾಸಿಂಗ್ಟನ್ ಇರ್ವಿಂಗ ಅವರ ಮಾತೇ ನೆನಪಿಗೆ ಬರುತ್ತವೆ! ಅವರ ಒಂದೊಂದು ಕಣ್ ಪನಿಯೂ ವಿಶ್ವಾತ್ಮನ ಹೃದಯದಲ್ಲಿ ಮೂಡಿ ನಿಲ್ಲುವ ಸತ್ಯದ ಶಿಶುವು ! ದೌರ್ಬಲ್ಯದ ಸೂಚಕವಲ್ಲ ಅವರ ಜಲಬಿಂದುಗಳು, ಘನ ವಾದ ತೇಜಸ್ಸಿನ ಕಿಡಿಗಳು! ಹತ್ತು ಸಾವಿರ ನಾಲಗೆಗಳು ಒಂದುಗೂಡಿ ತಮ್ಮ ಮಾತುಗಾರಿಕೆಯಿಂದ ಸಾಧಿಸಬಲ್ಲ ಪರಿಣಾಮವನ್ನು- ಅವು ಇನ್ನಷ್ಟು ಹೆಚ್ಚು ಪರಿಣಾಮಕಾರಿಯಾಗುವಂತೆ ಮೌನದಿಂದಲೇ ಸಾಧಿಸಬಲ್ಲವು.ಅವರ ಕಣ್ಣೀರು ದುಃಖದ ಹರಿಕಾರರು, ಮೂಕ ಪ್ರೇಮದ ಓಲೆಕಾರರು; ಸಾತ್ವಿಕ ಭಕ್ತಿ ಕಳುಹಿಸಿಕೊಟ್ಟ ಒಳ್ಳೆ ನಸ್ನಿಗಳ ನೇಹಿಗರು ............ !

ಕುರಿತೋದದೆಯೂ ಕಾವ್ಯಪ್ರಯೋಗಪರಿಣತಮತಿಗಳಾದ ಕನ್ನಡ ನಾಡವರ ಕೈಯಲ್ಲಿ ಕಲ್ಪನೆಯ ಈ ಮುದ್ದು ಕೂಸನ್ನು ಕೊಡುತ್ತಿರುವ ಸಮಯದಲ್ಲಿ ಹಿರಿಯರಾದ ನೀವು ಮುನ್ನುಡಿಯ ಕುಂಕುಮ ಹಚ್ಚಿ, ಅದಕ್ಕೆ ಸರ್ವ ಮಂಗಲ ಕೋರಬೇಕೆಂದು ನಾನು ಬೇಡುತ್ತೇನೆ. ಸಣ್ಣ ಲೇಖಕ ನೊಬ್ಬನು ತನ್ನ ಕಾಲದ ಹಿರಿಯ ಬರಹಗಾರರಿಗೆ ಇದಕ್ಕಿಂತಲೂ ಮಿಗಿಲಾದ ಗೌರವವನ್ನು ಇನ್ನಾವ ರೀತಿಯಿಂದ ವ್ಯಕ್ತಪಡಿಸಬಲ್ಲನೆಂಬುದೇ ನನಗೆ ತಿಳಿಯದಾಗಿದೆ.

ಇತ್ತ ಕಡೆ ನೀವು ಬಂದಾಗ ನಾನು ಕಾಣಬಯಸುತ್ತೇನೆ. ಹೋದ ವರುಷದಿಂದ ನನ್ನ ಪ್ರಕೃತಿಯು ಇಳಿಯುತ್ತಲೇ ಇದೆ. ಅಪೆಂಡಿಕ್ಸ ಶಸ್ತ್ರಕ್ರಿಯೆ ಆದ ಮೇಲೂ ಅಸ್ವಸ್ಥತೆ ನನ್ನನ್ನು ಬಿಟ್ಟು ಹೋಗಿಲ್ಲ. ಇಂದಿಲ್ಲ ನಾಳೆ ಸರಿಯಾದೀತೆಂದು ನಂಬಿದ್ದೇನೆ.

ಸಂಕ್ರಾಂತಿಯ ಹೊತ್ತಿಗೆ ಮುಟ್ಟಲಿರುವ ಈ ಓಲೆಯ ಜೊತೆಗೆ ಎಳ್ಳು ಬೆಲ್ಲ ಕಳುಹಿಸಿದ್ದೇನೆ. ನಮ್ಮ ಒಲವು ಹಾಗಿರಲೆಂದು ಬೇಡುತ್ತೇನೆ.

ನಿಮ್ಮವ

ಗಂಗಾಧರ ವಾಣಿಜ್ಯ ವಿದ್ಯಾಲಯ
ಹುಬ್ಬಳ್ಳಿ
೮—೧—೧೯೪೯

ಹಿರೇಮಲ್ಲೂರ ಈಶ್ವರನ್

[ ೨ ]

ಪ್ರಿಯ ಈಶ್ವರನ್

ನೀವು ಪ್ರೀತಿಯಿಟ್ಟು ಬರೆದ ಪತ್ರ ಇಂದೇ ಬಂದು ಮುಟ್ಟಿತು. ಓದಿ ಸಂತೋಷಗೊಂಡೆ. ನಿಮ್ಮನ್ನೂ ನಿಮ್ಮ ಕೃತಿಗಳನ್ನೂ ನಾನು ಮರೆಯುವುದು ಹೇಗೆ ಸಾಧ್ಯ! ವೀಸನಗರ ಹುಬ್ಬಳ್ಳಿ ದೂರವಾಗಿವೆ. ಆದರೆ ಹೃದಯಗಳು ಬಹಳ ಸಮೀಪವಾಗಿವೆ ರಜಿಸ್ಟರ ಮುಟ್ಟಿದೊಡನೆ ಓದಿ ಮುನ್ನುಡಿ ಕಳಿಸುತ್ತೇನೆ

ಮಾಸ್ತಿಯವರು ಅಲ್ಲಿ ಕಲ್ಪನಾ ಗ್ರಂಥಮಾಲೆಯ ದ್ವಿತೀಯ ವಾರ್ಷಿಕೋತ್ಸವಕ್ಕಾಗಿ ಬರುತ್ತಿರುವುದು ಸಂತೋಷ. ರಾಜಸಿಕ ಮನೋವೃತ್ತಿ ರಾಜಕಾರಣದಲ್ಲಿ ತಾಂಡವವಾಡುತ್ತಿದೆ, ಅದು ತಾಮಸಿಕವಾಗತೊಡಗಿದೆ. ಇದೇ ಬಗೆಯ ಮನೋವೃತ್ತಿ ಸಾಹಿತ್ಯದಲ್ಲಿಯೂ ಗೋಚರಿಸಹತ್ತಿದೆ. ಈ ಸಮಯದಲ್ಲಿ ಸಾಹಿತ್ಯದಲ್ಲಿದ್ದ ಸಾತ್ವಿಕ ಮನೋವೃತ್ತಿಗಳೆಲ್ಲ ಹತ್ತಿರ ಬರದೆ ಸಾಹಿತ್ಯ ಕಸುವುಗೊಳ್ಳಲಾರದು, ಜನತೆ ತಿಳಿಯಲಾರದು.

ನಿಮ್ಮ ಪ್ರಕೃತಿಯ ಅಸ್ವಾಸ್ಥ್ಯ ತಿಳಿದು ಖಿನ್ನನಾದೆ. ವಿಶ್ರಾಂತಿ, ವಿರಾಮಗಳನ್ನು ಪಡೆದು ಅದನ್ನು ಸುಧಾರಿಸಿಕೊಳ್ಳಿರಿ. ಅಧ್ಯಾಪಕ-ಸಾಹಿತಿಯ ಕೆಲಸಕ್ಕೆ ದೇಹ ಗಟ್ಟಿಯಂತ್ರವಾಗಿರಬೇಕಲ್ಲವೇ?

ಈ ಸಲ ಬೇಸಗೆಗೆ ಅತ್ತ ಬಂದಾಗ ಭೆಟ್ಟಿಯಾಗೋಣ. ನನ್ನದೆಲ್ಲ ಇಲ್ಲಿ ಚನ್ನಾಗಿ ಸಾಗಿದೆ. ಆಗೀಗ ಬರೆಯುತ್ತಿದ್ದೇನೆ. ಮೇಲಿಂದ ಮೇಲೆ ಭೆಟ್ಟಿಯಾದಾಗ ಅಂತಃಕರಣ ತೆರೆಯುವದು. ವೀಸನಗರದ ಗೋಕಾಕರು ಸಹ ಹುಬ್ಬಳ್ಳಿಯ ಹತ್ತಿರದ ಸವಣೂರಿನ ಹುಡುಗ! ಈ ಹುಡುಗರೆಲ್ಲ ಮೈತ್ರಿಯಿಂದ ಬೆರೆಯಬೇಕು. ಕರುಳ ಬಳ್ಳಿ ಬೆಳೆಯುವುದು ಸಹ ಇದೇ ರೀತಿಯಿಂದ.

........ ನೀವು ಕಳುಹಿಸಿದ ಸಂಕ್ರಾಂತಿಯ ಎಳ್ಳು ಬೆಲ್ಲ ನನ್ನನ್ನು ಪುಲಕಿತನನ್ನಾಗಿ ಮಾಡಿದವು. ಪ್ರೀತಿ ವಿಶ್ವಾಸಗಳು ಇಷ್ಟು ತುಂಬಿತುಳುಕುವ ಈ ಭೂಮಿಯಲ್ಲಿ ವಿರಸ-ನೀರಸ ಏಕೋ ತಿಳಿಯದು. ಆದರೂ ಕೆಲವೊಮ್ಮೆ ಹೃದಯ ಮುದುಡಿಕೊಳ್ಳುತ್ತದೆ. ಹೀಗೆ ನಿರಭ್ರವಾಗಿ ತೆರೆದ ನಮ್ಮ ಅಂತಃಕರಣ ಹೊನಲಾಗಿ ಬೆರೆಯಲಿ. ಈ ಹೊಸವರುಷದ ಶುಭ ಸಂಚಕಾರ ಸ್ವೀಕರಿಸಿರಿ. ಪ್ರೀತಿಯಿರಲಿ. ನಿಮ್ಮದೆಲ್ಲ ಮಂಗಲಮಯವಾಗಿ ಸಾಗಲಿ.........

ಎಂ. ಎಸ್. ಕಾಲೇಜು.
ವೀಸನಗರ
೧೩—೧—೧೯೪೯

ನಿಮ್ಮೊಲವಿನ
ವಿ. ಕೃ. ಗೋಕಾಕ

*

# ಕಲ್ಪನಾ ಪರಿಚಯ

ಪ್ರಿಯ ಸುಹೃದ,

ಕಲ್ಪನಾ ನಮಗೆ ಪ್ರಿಯದರ್ಶಿನಿಯಾಗಬೇಕು. ಆಕೆ ಕೋಮಲೆ, ರೂಪವತಿ, ರಾಗಿಣಿ. ಎಲ್ಲಕ್ಕೂ ಮಿಗಿಲಾಗಿ ಅವಳು ತಪಸ್ವಿನಿ. ಅವಳ ಮಾತು ಮುತ್ತು, ನಡತೆ ಗಂಭೀರ, ಧ್ಯೇಯ ಪವಿತ್ರತಮ. ವಸಂತ ಲಕ್ಷ್ಮಿಯಂತೆ ತನ್ನ ಬಾಳು ಸುಂದರವಾಗಬೇಕು, ಬಿದಿಗೆಯ ಚಂದ್ರಮನಂತೆ ತನ್ನ ಚಾರಿತ್ರ್ಯ ನಿರ್ಮಲವಾಗಬೇಕು, ವನಸುಮದಂತೆ ತನ್ನ ಜೀವನ ವಿಕಸಿತವಾಗಬೇಕು. ಅದರಿಂದಾಗಿ ತನ್ನ ಸುತ್ತಣ ಬಾಳನ್ನು ಹಿಗ್ಗಿಸಿ, ಜನಮನವನ್ನು ರಂಜಿಸಿ, ಅವರ ಬದುಕಿನ ಹಂತನ್ನು ಮೇಲಕ್ಕೆತ್ತಿನಯಗೊಳಿಸಿ ಮನುಜ ಲೋಕವನ್ನೇ ಮಂದಾರ ಲೋಕವನ್ನಾಗಿ ಪರಿವರ್ತನಗೊಳಿಸಬೇಕೆಂಬ ಹಂಬಲವುಳ್ಳಾಕೆ ನಮ್ಮ ಕಲ್ಪನಾ.

ಈ ನಮ್ಮ ಸ್ವರ್ಣಸ್ವಪ್ನರಂಗಿನಿ ಕಲ್ಪನಾ ನಿಮ್ಮ ಹೆಮ್ಮಗಳು. ಕನ್ನಡ ನಾಡಿನ ಕಿರುವಕ್ಕಳು, ಮಾನ್ಯೂಗರು, ಕಾವ್ಯಪ್ರಯೋಗ ಪರಿಣತ ಮತಿಗಳು ಎಲ್ಲರೂ ಇವಳ ಉಡಿಯಲ್ಲಿ ಹಣ್ಣು ಕಾಯಿ ತುಂಬಿ, ಹಣೆಗೆ ಕುಂಕುಮವಿಟ್ಟು ಸರ್ವಮಂಗಲೆಯಾಗಲೆಂದು ಹರಕೆಯನ್ನೀಯಬೇಕೆಂದು ನಾವು ವಿನಯ ಪೂರ್ವಕವಾಗಿ ಕೋರುತ್ತೇವೆ.

ಇದುವರೆಗೆ ಕಲ್ಪನಾ ಗೆಯ್ದ ಕಾರ್ಯವನ್ನು ಕುರಿತು ಪ್ರೇಮದಿಂದ ಒಂದು ಮಾತು ಹೇಳಿದವರು ಆಕೆಯಲ್ಲಿ ಉತ್ಸಾಹ ತುಂಬಿದಾರೆ. ಒಂದು ಮಾತು ಕಡಮೆ ನುಡಿದವರು ಲೋಕದ ರೀತಿ ನೀತಿಗಳ ಬಗೆಗೆ ಆಕೆಗೆ ಎಚ್ಚರಿಕೆ ಕೊಟ್ಟಿದಾರೆ. ಯಾರು ಹೆಚ್ಚು ಯಾರು ಕಡಮೆ? ಏನೆಂದು ಹೇಳೋಣ? ಪ್ರಪಂಚದ ದ್ವಂದ್ವ ವಿಷಮತೆಗಳಿಂದ ದೂರವಾದ ನಮ್ಮ ಕಲ್ಪನಾ ಎಲ್ಲರಿಗೂ ಋಣಿ.

ನಾಡು ನುಡಿಯ ಏಳ್ಗೆಗಾಗಿ, ಜನಮನದ ವಿಕಾಸಕ್ಕಾಗಿ ಯಾವ ಸಾಹಿತ್ಯವನ್ನೆಲ್ಲ ಒದಗಿಸಬೇಕೊ ಅದನ್ನೆಲ್ಲ ನಾವು ಕಷ್ಟಪಟ್ಟು ಹುಡುಕಿ ತಂದು ನಮ್ಮ ಪಾಲಿನ ಕಾರ್ಯವನ್ನು ವಿಶ್ವಾಸದಿಂದ ಮಾಡುತ್ತೇವೆ. ನಮಗೆ

ಇದು ಪವಿತ್ರವಾದ ದುಡಿಮೆ. ಇದರಲ್ಲಿ ನಮಗೆ ಸುಖವಿದೆ, ಹಿತವಿದೆ, ಪುಣ್ಯವಿದೆ. ಕಲ್ಪನಾ ನೆಲದ ಮಗಳಾಗಬೇಕೆಂಬ ಔದಾರ್ಯವನ್ನು ಮಾತ್ರ ನೀವು ತೋರುವುದಾದರೆ ನಾವು ನಮ್ಮ ಕರ್ತವ್ಯವನ್ನು ಇನ್ನೂ ಹೆಚ್ಚು ಸಂತೋಷದಿಂದ ಪೂರೈಸ ಬಯಸುತ್ತೇವೆ.

ಪ್ರಕಟನಾ ಕಾರ್ಯದಲ್ಲಿ ಮುಂಬಯಿಯ ಕಲಾವಿದ ಗೆಳೆಯ ರಾಘವೇಂದ್ರರು ತುಂಬ ನೆರವಾಗಿದ್ದಾರೆ. ಅವರು ತೋರುವ ಪ್ರೇಮ ವಿಶ್ವಾಸಗಳು ಅವರವೇ. ಅಲಂಕಾರಪ್ರಿಯೆಯಾದ ಕಲ್ಪನಾಳನ್ನು ವಿಶ್ವಾಸದಿಂದ ನೋಡಿಕೊಳ್ಳುವ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು.

ಧಾರವಾಡದ ತೋಂಟದಾರ್ಯ ಪ್ರೆಸ್ಸಿನ ವ್ಯವಸ್ಥಾಪಕರಾದ ಶ್ರೀ ಎಸ್.ಬಿ. ಹರಿಹರ ಅವರು ಅಚ್ಚಿನ ಕಾರ್ಯದಲ್ಲಿ ತುಂಬ ನೆರವಾಗಿದಾರೆ. ಅದೇ ಪ್ರೆಸ್ಸಿನ ಕೆಲಸಗಾರರೂ ತೋರಿರುವ ಶ್ರದ್ಧೆಯೂ ನಮಗೆ ದೊಡ್ಡದು. ಹಿಂದಮಾತಾ ಪ್ರೆಸ್ಸಿನ ನವಲೂರ, ಹುಬ್ಬಳ್ಳಿಯ ಶ್ರೀ. ಎಸ್. ಎಫ್. ಕಟ್ಟೀಮನಿ ಮತ್ತು ಗೆಳೆಯ ಜಿ. ಬಿ. ಎಸ್, ರಾವ್, ಎಂ. ಎ. ಅವರು ಈ ಹೊತ್ತಗೆಯನ್ನು ಹೊರಗೆ ತರುವಲ್ಲಿ ಇತ್ತ ನೆರವನ್ನು ನಾವು ವಿಶ್ವಾಸದಿಂದ ನೆನೆಯುತ್ತೇವೆ.

ಹಿರೇಮಲ್ಲೂರ ಈಶ್ವರನ್



# ಒಳಸಿಡಿ







# ರಾಜಾರಾಣಿ ದೇಖೋ!

●

ಗುರುದೇವನ 'ಕಾಬೂಲಿವಾಲಾ' ಓದುತ್ತ ಕುಳಿತಿದ್ದೆ.

ವಸಂತಮಾಸ ಕಾಡಿನಿಂದ ನಾಡಿಗೆ, ನಾಡಿನಿಂದ ಬೀಡಿಗೆ ಸಾಗಿ ಬಂದಿತ್ತು. ಸುಗ್ಗಿ ಹಳ್ಳಿಪಳ್ಳಿಗಳನ್ನು ಸೇರಿ ಹಸಿವೆಯಿಂದ ನರಳುವವರ ಮೊಗದ ಮೇಲೆ ನಗೆಯ ಕಿರಣಗಳನ್ನು ಮೂಡಿಸಿತ್ತು. ಗೌಡನಿಂದ ಓಲೆಯ ಕಾರನವರೆಗೆ, ಅರಸನಿಂದ ಆಳಿನವರೆಗೆ ಎಲ್ಲರನ್ನು ಆ ತಿಂಗಳು ದಣಿಸಿತ್ತು. ರಾಜಕಾರಣ ದುರಂಧರರು 'ಫ್ರಿಸ್ಕೋ'ದ ಕಡೆ ಕಣ್ಣೆತ್ತಿ ನೋಡಿದರೆ ಕೂಲಿ-ಕುಂಬಳಿಗಳು 'ಪೀಕ ವಸೂಲಿ' ಮಾಡುವ ಮಾಮಲೇದಾರನ ಸಿಬ್ಬಂದಿಯ ಕಡೆ ಗೋಣೆತ್ತಿ ನೋಡುತ್ತಿದ್ದರು. ದೊಡ್ಡವರು ಸಣ್ಣವರನ್ನು ತಿಂದು ಬದುಕುವುದು ಜಗದ ನ್ಯಾಯವೇನೊ! ಆದರೆ ಇಂತಹ ನ್ಯಾಯಾನ್ಯಾಯಗಳನ್ನು ಮೀರಿ ನಿಂತವರ ಸಂಗಡವೊಂದಿದೆ. ಆ ಸಂಗಡದವರ ಮೇಲ್ವಿಚಾರಣೆ ಮಾಡುವವನು ಈಶನೊಬ್ಬನೆ. ಇಲ್ಲಿಯವರೇನು ಮಾಡಿಯಾರು?

'ಕಾಬೂಲಿವಾಲಾ' ಓದು ನಡದೇ ಇದ್ದಿತು........ಕಥೆಗಾರ ಬರೆಯ ತೊಡಗಿದ್ದ ಕಾದಂಬರಿಯ ಹದಿನೇಳನೆಯ ಪ್ರಕರಣ ಹಾಗೆಯೆ ಉಳಿದಿತ್ತು; ನಾಯಕ ಪ್ರತಾಪಸಿಂಹ ಕಾಂಚನಲತೆಯನ್ನು ತೋಳ ತೆಕ್ಕೆಯಲ್ಲಿರಿಸಿಕೊಂಡು ಮೂರನೆಯ ಮಹಡಿಯಿಂದ ಜಿಗಿದು ಹೋಗತೊಡಗಿದ್ದ. ಕಾದಂಬರಿಯ ಕಥೆ ಇಷ್ಟಕ್ಕೆ ನಿಂತು ಕಾಬೂಲಿವಾಲಾ ರಹಮಾನನ ಕಥೆಗೆ ಮೊದಲಾಗಿತ್ತು..ಬಾಲಕಿ ಮೀನಿ ಮೊದಲು ರಹಮಾನನನ್ನು ಕಂಡು ಅಂಜಿದುದು,ಮುಂದೆ ಅವರಿಬ್ಬರ ಸ್ನೇಹ ಗಾಢವಾದುದು; ವಿಧಿಯ ಅಪ್ಪಣೆಯ ಮೇರೆಗೆ ರಹಮಾನ್ ಸೆರೆಮನೆಗೆ ('ಮಾವನ ಮನೆಗೆ'!) ಹೋದುದು, ಅಲ್ಲಿಂದ ತಿರುಗಿ ಬಂದು ಎಳೆಯ ಮೀನಿಯನ್ನು ಕಾಣಲೆಳಸಿದುದು; ಮೀನಿಯ ತಂದೆ ಮಗಳ ಮದುವೆಯ ಸಂದರ್ಭ ಸೂಚಿಸಿದುದು, ಆದಕ್ಕೋಸುಗ ರಹಮಾನ್‌ಗೆ ಹಿಂದಿರುಗಿ

ಹೋಗಬೇಕಾಗಿ ಬಂದುದು; ಅಷ್ಟರಲ್ಲಿ ಕಾಬೂಲಿವಾಲಾ ತಿರುಗಿ ಬಂದು ಮಿನಿಗೆ ಹಣ್ಣು ಕೊಟ್ಟುದು, ಪ್ರಸಂಗಕ್ಕೆ ಸರಿಯಾಗಿ ಮಗಳ ಹಸ್ತದ ಗುರುತನ್ನೊಳಗೊಂಡ ಕಾಗದ ತೋರಿಸಿದುದು; ಅದನ್ನು ನೋಡಿದಾಗ ಮಿನಿಯ ಅಪ್ಪನ ಕಣ್ಣಿನಿಂದ ಉಪ್ಪುನೀರು ಬಂದು ಕ್ಷಮೆ ಕೋರಿದುದು.......... ಇನ್ನೂ ಕಥೆಯ ಓದು ಮುಂದುವರೆಯುತ್ತಿರುವಷ್ಟರಲ್ಲಿ ನನ್ನ ತಂಗಿ ಪಾರ್ವತಿ- ಏಳುವರುಷದಾಕೆ—ಹತ್ತಿರ ಬಂದು ಓದಿಗೆ ಅಡ್ಡಿ ಮಾಡಿದಳು.

ಆ ಹೊತ್ತಿಗೆ ಇದಿರಿಗಿದ್ದ ಗಡಿಯಾರದಲ್ಲಿ ಐದು ಬಡೆದು ಇಪ್ಪತ್ತೈದು ನಿಮಿಷ ಆಗಿದ್ದಿತು. ಪಡುವಲೆಡೆಗೆ ಮುಖಮಾಡಿಕೊಂಡು ನಿಂತ ನಮ್ಮ ಮನೆಯ ಬಾಗಿಲ ಸಲಾಕೆಗಳೊಳಗಿಂದ ರವಿಯ ಕಿರಣಗಳು ಹರಿದು ಬಂದು ಗಡಿಯಾರದಲ್ಲಿ ವೇಳೆ ಗುಣಿಸಲರಿಯದ ನನ್ನ ತಾಯಿಗೆ ಹೊತ್ತು ಸೂಚಿಸುತ್ತಿದ್ದವು. ನನ್ನ ಕೋಣೆಯ ಕಿಡಕಿಯಿಂದ ಹಾಯ್ದು ಬಂದ ಹೊಂಗಿರಣಗಳು ದೂರದಲ್ಲಿಯೇ ನಿಂತು ಕಿವಿಮಾತು ಹೇಳುತ್ತಿದ್ದವು. ಹೊರಗೆ ಬೀದಿಯಲ್ಲಿ ಬಾವಿಯಿಂದ ಮನೆಗೆ, ಮನೆಯಿಂದ ಬಾವಿಗೆ ಬಿಂದಿಗೆ ಹೊತ್ತುಕೊಂಡು ಕೈ ಬೀಸುತ್ತ ನಡೆದಿದ್ದ ಹೆಂಗಳೆಯರ ನೆರಳನ್ನು ಆಗಾಗ ಕಿರಣಗಳು ನನ್ನಿದಿರು ತಂದಿರಿಸುತ್ತಿದ್ದವು. ಬಾಲೆಯರು ನೀರು ಹೊತ್ತು ತರುವಾಗಲೆಲ್ಲ ಹಳ್ಳಿಯ ಮಕ್ಕಳು ಓಣಿಯೊಳಗಿನ ಮಣ್ಣು ಕೆದರಿ ಸೂರ್ಯನ ಮುಖಕ್ಕೆ ತೂರುವ ಕಾರ್ಯ ನಡಸಿಯೆ ಇರುತ್ತಿದ್ದರು. ಸಂಜೆ ಇಳೆಗೆ ಇಳಿಯುವಂದು ಆ ಮಕ್ಕಳ ಆಟ ನೋಡಬೇಕು. ಕೇಕೆ ಹೊಡೆಯುವರು, ಗಂಟಲು ಬಿರಿಯುವಂತೆ ಚೀರಾಡುವರು. ಆಗ ಹಿರಿಯರಾದವರು ಬಂದು ಮಣ್ಣಾಟವಾಡುವ ಬಾಲಕರನ್ನು ಬೆದರಿಸಿ ಹೊಡೆದೋಡಿಸುವ ಅನ್ಯಾಯದ ಕೆಲಸವೂ ಆಗಾಗ ನಡದೇ ಇರುತ್ತದೆ. ಮಗುವು ಬೆಳದೇ ಮುದುಕನಾಗಬೇಕೆಂಬುದನ್ನು ಅವರು ಗಮನಕ್ಕೆ ತಂದುಕೊಂಡರೆ ಮಕ್ಕಳ ಮಣ್ಣಾಟಕ್ಕೆ ಅಡ್ಡಿಯಾಗಿ ಬರುತ್ತಾರೇನೋ ನೋಡಬೇಕು! ಹಾಲುಗಲ್ಲದ ಹುಡುಗರು ಅಂಗಳ ಸೇರಿದ ಬಳಿಕ ವಸಂತ ಮಾಸದ ಹಕ್ಕಿಗಳು ಗೂಡಿನಲ್ಲಿ ಪವಡಿಸುವದುಂಟೇ?

ಪಾರ್ವತಿ ಬಂದಾಗ 'ಕಾಬೂಲಿವಾಲಾ' ಓದು ಅಷ್ಟಕ್ಕೆ ನಿಂತಿತು. ಮಿನಿ ಬಂದಳೊ ಇಲ್ಲವೊ? ಅವಳ ಬರವನ್ನು ಕಾಯುವ ಇಷ್ಟವೂ ನನಗಾಗಲಿಲ್ಲ. ಪಾರ್ವತಿ ಇದಿರಿಗಿದ್ದಾಗ ನನಗೆ ಇನ್ನೇನೂ ಬೇಡ. 'ಸಾಯುಜ್ಯ

ಪದವಿಯನ್ನು ಕೊಡುತ್ತೇನೆ. ಪಾರ್ವತಿಯನ್ನು ಅರೆನಿಮಿಷ ನೋಟದಿಂದ ದೂರಿರಿಸಿ ನನ್ನೆಡೆಗೆ ನೋಡು' ಹೀಗೆಂದು ಈಶ್ವರನು ಪ್ರತ್ಯಕ್ಷವಾಗಿ ಬಂದು ಹೇಳಿದರೂ ನಾನು ಅವನ ಮಾತಿಗೆ ಒಪ್ಪಿಗೆ ಕೊಡಲಾರೆ. ಪಾರ್ವತಿಯ ತೊದಲು ನುಡಿಯ ಮರೆಯಲ್ಲಿ ವಿಶಾಲ ಬ್ರಹ್ಮವನ್ನು ಕಾಡು ಸುಖಿಸುವ ನನಗೆ ಈಶ್ವರನ ಹಂಗೇಕೆ ?

ನಾನು ಓದುತ್ತಿದ್ದ ಪುಸ್ತಕ ಕೆಳಗಿರಿಸಿದ ಕೂಡಲೆ ಪಾರ್ವತಿ ಎತ್ತಿಕೊಂಡಳು. ಆಗ ಗಡಿಯಾರ ಅರ್ಧ ಘಂಟೆ ಬಾರಿಸಿತು. 'ಢಣ್' ನಾದ ಕೋಣೆಯ ಮೂಲೆ ಮೂಲೆಗಳನ್ನು ಸುತ್ತುವರಿಯುತ್ತ ಬಂದು ಗಾಳಿಯಲ್ಲಿ ಕರಗಿಹೋಯಿತು.

'ಅಣ್ಣ, ಗಡಿಯಾರಕ್ಕೆ ಅವ್ವ ಉಂಟೇ ?' ಪಾರ್ವತಿ ಕೇಳಿದಳು.

'ಛೀ, ಹುಚ್ಚಿ. ಏನು ಮಾತಿದು ?' ಅವಳ ಪ್ರಶ್ನೆಗೆ ಸರಿಯಾದ ಉತ್ತರ ಸಿಕ್ಕದೆ ಹೋದುದರಿಂದ ಹೀಗೆಂದೆ.

'ಅವ್ವ ಇಲ್ಲದಿದ್ದರೆ ಅದಕ್ಕೆ ಹಾಲು ಅನ್ನ ಯಾರು ಉಣಿಸುತ್ತಾರೆ ?'

'ಛೀ ಅದು ಉಣ್ಣುವದಿಲ್ಲ.'

'ಏಕೆ ? ಅವ್ವ ಇಲ್ಲವೇನು ? ಅಪ್ಪ ಬಡವನೇನು ?'

ಪಾರ್ವತಿಯ ಈ ಮಾತಿಗೆ ಉತ್ತರ ಹುಡುಕಿ ಹೇಳುವಷ್ಟರಲ್ಲಿ ತಾಯಿ ನಾವು ಕುಳಿತಲ್ಲಿಗೆ ಬಂದು 'ಸೂರ್ಯ ತಾಯ ಹೊಟ್ಟೆ ಸೇರಲು ಕೈಮಾರು ಹೊತ್ತಿದೆ' ಎಂದಳು. ಪಾರ್ವತಿ ಅವ್ವನ ಮಾತು ಅಳೆದು ನೋಡಲು ಕೋಣೆಯ ಕಿಡಿಕೆಯೊಳಗಿಂದ ಹೊರಗೆ ನೋಡಿದಳು.

'ರಾಜಾರಾಣಿ ದೇಖೋ !' ಇಂತು ಪಾರ್ವತಿ ಸಾನಂದ ಸಾಶ್ಚರ್ಯ ದಿಂದ ಒಮ್ಮೆಲೆ ಬೆಚ್ಚಿಬಿದ್ದು ಕೂಗಿದಳು. ಕೋಣೆ ಪಡಿದನಿಗುಟ್ಟಿತು. ರಹಮಾನ್ ತನ್ನ ಮಗಳಂತಿದ್ದ ಮಿನಿಯನ್ನು ನೋಡಲು ಕಾಯ್ದು ನಿಂತಿರ ಬಹುದಾದ ಸನ್ನಿವೇಶವನ್ನು ನೆನೆಯುತ್ತಲೆ ನಾನೂ ಹೊರಗೆ ನೋಡಿದೆ.

ಇಳಿವರೆಯದ ಮನುಷ್ಯನೊಬ್ಬ ಇದಿರಿನಲ್ಲೊಂದು ತಗಡಿನ ಪೆಟ್ಟಿಗೆ ಇರಿಸಿ ತಾಳ ಬಡೆಯುತ್ತ 'ರಾಜಾರಾಣಿ ದೇಖೋ' ಎಂದು ಕೂಗುತ್ತ ಓಣಿಯ ಮನೆಗಳ ಬಾಗಿಲವನ್ನೆ ದಿಟ್ಟಿಸುತ್ತಿದ್ದನು.

ತಾಳ ಕಟಿಯುವದೊಂದೇ ತಡ. ಬೊಮ್ಮನ ಹಳ್ಳಿಯ ಕಿಂದರಿ ಜೋಗಿಯ 'ಟಿಂಗ್' 'ಟಿಂಗ್' ನಾದಕ್ಕೆ ಕುರುಡರು ಕುಂಟರು ಓಡಿ ಬಂವಂತೆ ಎಳೆಯ ಮಕ್ಕಳು ಮನೆಯನ್ನಗಲಿ ಓಡಿ ಓಡಿ ಬಂದರು ಎರಡು ನಿಮಿಷ ಪೂರ್ತಿಯಾಗಿ ಆತ ತಾಳ ಹಾಕುತ್ತಿದ್ದಂತೆಯೆ ಊರ ಮಕ್ಕಳೆಲ್ಲ ಅಲ್ಲಿ ಬಂದು ಕಲೆತರು ತಾಯ ಮೊಲೆ ಸೇದುವದನ್ನು ನಿಲ್ಲಿಸಿ ಬಂದ ಕಂದಮ್ಮಗಳು ನಾಲಗೆ ಚಪ್ಪರಿಸುತ್ತಲೆ ಒಬ್ಬರ ಮೇಲೊಬ್ಬರು ಏರಿ ಬಂದು ಹಣಿ ಹಣಿಕಿ ನೋಡುತ್ತಿದ್ದವು. ಒಂದು ಮಗು ರೊಟ್ಟಿ ಬೆಲ್ಲ ಹಿಡಿದುಕೊಂಡು ಧಾವಿಸಿ ಬರುತ್ತಿರುವಾಗಲೆ ಬೆಲ್ಲ ಜಾರಿ ಬಿದ್ದುದನ್ನು ನೋಡಿದೆ. ಮಗುವಿಗೆ ಅದರ ಅರಿವಿರಲಿಲ್ಲ. ತಾಳದ ತನನನ ಸಪ್ಪಳದಲ್ಲಿಯೆ ಅದರ ಸುಖ ಅಡಗಿತ್ತು. ಇನ್ನೊಂದು ಮಗು ತಲೆಗೆ ಕುಲಾಯಿಯನ್ನು ಅವಸರದಲ್ಲಿಯೆ ಕಟ್ಟಿಕೊಂಡು ಬಂದಿತ್ತು. ಇಬ್ಬರು—ಅಣ್ಣ, ತಂಗಿ—'ರಾಜಾರಾಣಿ ದೇಖೋ' ನೋಡಲು ಉದ್ವೇಗಗೊಂಡು ಮನೆಯಲ್ಲಿ ಅವಳ ಕುಪ್ಪಸ ಅವನು ತೊಟ್ಟು, ಅವನ ಕಸೆ ಅಂಗಿ ಅವಳು ತೊಟ್ಟು ಹಿಂಬಡ ಹಚ್ಚದೆ ಓಡುತ್ತ ಬರುವದನ್ನು ಕಂಡಾಗ ನನಗೆ ತುಂಬ ನಗೆ ಬಂದಿತು. ಅಂತಹ ನಗೆ ನಾನು ಎಂದೂ ನಕ್ಕಿರಲಿಲ್ಲ. ಅಲ್ಲಿ ಕೂಡಿದ ಮಕ್ಕಳನ್ನೆಲ್ಲ ಯಾವುದೋ ಮೋಡಿಯಿಂದ ಮಂತ್ರ ಮುಗ್ಧರನ್ನಾಗಿ ಮಾಡಿ 'ರಾಜಾರಾಣಿ ದೇಖೋ' 'ಹೇ ಗಮ್ಮತ್ ನೋಡು' ಎನ್ನುತ್ತ ತಾಳ ಬಡೆಯುವ ಆ ಮನುಷ್ಯನ ರೇಖಾ ಚಿತ್ರವನ್ನೂ, ಗುರುದೇವನ ಕಾಬೂಲಿವಾಲಾ ರಹಮಾನನ ಚಿತ್ರವನ್ನೂ ಕಲ್ಪನೆಯ ಬೆಳಕಿನಲ್ಲಿ ಹೋಲಿಸಿ ನೋಡಿದೆ.

ಚಿತ್ರ ಎರಡೂ ಒಂದೇ; ದೇಹ ಮಾತ್ರ ಭಿನ್ನ ಭಿನ್ನ.

ಅವನ ಹೆಸರು ನನಗೆ ಗೊತ್ತಿಲ್ಲ. ಊರಿನ ಮಕ್ಕಳೆಲ್ಲರೂ ಅವನಿಗೆ 'ರಾಜಾರಾಣಿ ದೇಖೋ' ಎಂದು ಮಾತ್ರ ಕರೆಯುತ್ತಾರೆ. 'ರಾಜಾರಾಣಿ ದೇಖೋ ಬಂದ' ಎನ್ನುತ್ತಾರೆ. 'ರಾಜಾರಾಣಿ ದೇಖೋ, ನಮ್ಮ ಮನೆಯ ಹತ್ತಿರ ಬಾ' ಎಂದು ಅವನಿಗೆ ಕೇಳುತ್ತಾರೆ. ಅವನಾದರೂ 'ಬಂದೆ ಶಾನೂ' 'ಬಂದೆ ನೀಲೂ' ಎಂದು ಉತ್ತರ ಕೊಡುತ್ತಾನೆ. ನನಗಾದರೂ ಅದೇ ಹೆಸರು ಹೆಚ್ಚಿಗೆ ಚೆನ್ನ ಎಂದೆನಿಸುತ್ತದೆ. ಆದುದರಿಂದ ಸದ್ಯಕ್ಕೆ ಅವನ ಹೆಸರು 'ರಾಜಾರಾಣಿ ದೇಖೋ' ಎಂದು ಇಟ್ಟುಕೊಂಡರಾಯಿತು. ತಲೆಯ

ಮೇಲೆ ಒಂದು ಗೇಣಿನ ಕೆಂಪು ಟೊಪ್ಪಿಗೆ, ನಡುವಿಗೊಂದು ಚಿಕ್ಕ ಪಂಜೆ, ಮೊಳ ಕಾಲಿನವರೆಗೆ ಇಳಿದಿದ್ದ ಅಂಗಿ, ಅಂಗಿಯ ತೋಳನ್ನು ಮೊಳಕೈವರೆಗೆ ಮಡಿಚಿದ್ದನು. ನೋಡುವದಕ್ಕೆ ಗಂಭೀರವಾಗಿತ್ತು ಅವನ ಮುಖಮುದ್ರೆ!

'ರಾಜಾರಾಣಿ ದೇಖೋ' ಹುಡುಗರು ಬಂದಂತೆಲ್ಲ ಜೋರಿನಿಂದ ತಾಳ ಬಾರಿಸಹತ್ತಿದನು. "ಹೇ, ಗಮ್ಮತ್ ನೋಡು, ಹೇ, ಮಜಾಕ ನೋಡು" ಎಂದೆನ್ನುತ್ತ ತಾಳಕ್ಕೆ ದನಿಗೂಡಿಸತೊಡಗಿದನು ಹುಡುಗರು ನೋಡುತ್ತಲೇ ಇದ್ದರು ಅವನು ಬಡೆಯುತ್ತಲೇ ಇದ್ದ.

ಪಾರ್ವತಿ ನನ್ನಿಂದ ಓಡಿ ಹೋಗಲು ಆಗಲೆ ಯತ್ನಿಸಿದಳು. ಅದಕ್ಕಾಗಿ ಆವಳು ಮಿಡುಕುವದೂ ಗೊತ್ತಾಯಿತು. ಕಿಸೆಯಿಂದ ಒಂದಾಣೆ ತೆಗೆದು ಅವಳ ಕೈಯಲ್ಲಿರಿಸಿದೆ. ಪಾರ್ವತಿ ಓಡಿಹೋಗಿ ಬಾಲಕರ ಗುಂಪಿನಲ್ಲಿ ನುಗ್ಗಿ 'ಏಯ್ ರಾಜ ರಾಣಿ ದೇಖೋ, ಈ ಆಣೆ ತಗೋ. ತೋರಿಸು ಗಮ್ಮತ್' ಎಂದಳು. ಅವನು ಆಣೆಯನ್ನು ತೆಗೆದುಕೊಂಡು ಹುಡುಗರನ್ನೆಲ್ಲ ಇಂಬಾಗಿರಿಸಿ ಪಾರ್ವತಿಗೆ ತನ್ನ 'ಗಮ್ಮತ್' ಡಬ್ಬಿಯ ಕಿಂಡಿಯಲ್ಲಿ ನೋಡಲು ಹೇಳಿದನು.

ನಾನು ನಿಂತಲ್ಲಿಂದಲೆ ಅವರೆಡೆಗೆ ನೋಡಿದೆ. 'ರಾಜಾರಾಣಿ ದೇಖೋ' ತನ್ನ ಕಾರ್ಯಕ್ಕೆ ಪ್ರಾರಂಭ ಮಾಡಿದ್ದನು. ತಂಗಿ ಗಮ್ಮತ್ ಡಬ್ಬಿಯ ಕಿಂಡಿಯಲ್ಲಿ ಕಣ್ಣಿಟ್ಟು ತುದಿಗಾಲ ಮೇಲೆ ಕುಳಿತು ನೋಡುತ್ತಿದ್ದಳು. ಅವನು ತಾಳದ ಜತೆಗೆ ಹೇಳುತ್ತಿದ್ದ:

"........ರಾಜಾರಾಣೀನ ನೋಡು. ಅವರ ದವಲತ್ತು ನೋಡು. ರಾಜಾನ ದರ್ಬಾರ ನೋಡು ರಾಣಿ ಮಂದಿರ ನೋಡು. ದರ್ಬಾರ ಹೊಗಳೊ ಕವೀನ ನೋಡು. ಕವಿಯ ತಲಿಯ ಮೇಲಿನ ಪುಚ್ಛಾನ ನೋಡು........ಹೇ. ಗಿರಣೀನ ನೋಡು. ಗಿರಣ್ಯಾಗ ದುಡಿಯೋ ಕೂಲಿ ಮಂದೀನ ನೋಡು. ಬಸಿರು ಹೆಂಗಸರನ್ನು ನೋಡು. ಮಕ್ಕಳಿಗೆ ಅಪು ತಿನಿಸೋದು ನೋಡು. ಸಣ್ಣ ಹುಡುಗೋರ್ನ ನೋಡು. ಅವರ ಡೊಳ್ಳು ಹೊಟ್ಟೀನ ನೋಡು. ಕಾಲು ಏಟೇಟು ಅದಾವು ನೋಡು........ಹೇ, ಏಳು ಅಂತಸ್ತಿನ ಮನೀನ ನೋಡು. ಮನ್ಯಾಗಿನ ವ್ಯಾಪಾರಿಯರ ನೋಡು. ಚಾಳೀಸು ಹಾಕಿದ ಕಣ್ಣನು ನೋಡು. ಜಾಳಗಿ ಹಾಕಿದ ಕೂದ್ಲಾನ ನೋಡು. ಬಣ್ಣಾ ಹಚ್ಚಿದ ತುಟೀನ ನೋಡು.

ನಡೆವ ಬಿಂಕಾನ ನೋಡು........ಹೇ, ಹಾದೀ ಮ್ಯಾಲೆ ಮಕ್ಕೊಂಡ ಮಂದೀನ ನೋಡು.ಹೇ, ಸಂಸಾರದ ಆಟಾನು ನೋಡು.ರಾಜಾರಾಣಿ ಗಮ್ಮತ್ ನೋಡು"

ನನ್ನ ತಂಗಿ ಪಾರ್ವತಿ ಅವನ ಮಾತನ್ನು ಹಿಂಬಾಲಿಸಿ ಗಮ್ಮತ್ ಪೆಟ್ಟಿಗೆಯಲ್ಲಿ ಕುತೂಹಲದಿಂದ ನಿರೀಕ್ಷಿಸುತ್ತಿದ್ದಳು. ಹೊರಗಿನಿಂದ ಬೆಳಕು ಬಂದು ಒಳಸೇರದ ಹಾಗೆ ಆಕೆ ಇನ್ನೂ ಎಚ್ಚರ ವಹಿಸಿ ನೋಡುತ್ತಿದ್ದಳು. ತಮಾಷಾ ಪೆಟ್ಟಿಗೆಯಲ್ಲಿಯ ದೃಶ್ಯಗಳನ್ನು ನೋಡಿ ಪಾರ್ವತಿ ಪಡಬಹುದಾದ ಸುಖಕ್ಕಿಂತಲೂ ಹೆಚ್ಚಾಗಿ ಹಳ್ಳಿಯ ಮಕ್ಕಳು ರಾಜಾರಾಣಿ ದೇಖೋನನ್ನು ನೋಡಿಯೆ ಆನಂದ ಹೊಂದುತ್ತಿದ್ದರು. ಒಂದು ಚಿತ್ರ ಮುಗಿದಾದ ಮೇಲೆ ಪರದೆ ಏರಿಸಿ ಮತ್ತೊಂದು ಚಿತ್ರ ತೋರಿಸುವಾಗ ರಾಜಾರಾಣಿ ದೇಖೋ ದಾರ ಎಳೆದು ಸಪ್ಪಳ ಮಾಡುತ್ತಿದ್ದನು. ಹುಡುಗರಿಗೆ ಆಗ ಮತ್ತೊಂದು 'ನಮೂನೆ 'ತಮಾಷಾ' ನಡೆಯಿತೆಂದು ತಿಳಿಯುತ್ತಿತ್ತು. ಅವರು ಕೂಡಲೆ ಚಪ್ಪಾಳೆ ಯಿಕ್ಕಿ ತಮ್ಮ ಆನಂದ ವ್ಯಕ್ತಪಡಿಸುತ್ತಿದ್ದರು. ರಾಜಾರಾಣಿ ದೇಖೋ ಸಭಿಕರಿಗೆ ಮೌನದಿಂದಿರುವಂತೆ ತಾಳ ಬಡೆಯುವ ಕೈಯೆತ್ತಿ ನಗುಮುಖದಿಂದ ಸೂಚಿಸುತ್ತಿದ್ದನು. ಆ ಕ್ಷಣಕ್ಕೆ ಮೌನ ಅಲ್ಲಿ ತುಂಬಿ ತುಳುಕುತ್ತಿತ್ತು. ರಾಜಾರಾಣಿ ದೇಖೋನ ಗಮ್ಮತ್ ಹಾಡಿಗೆ ಮತ್ತೆ ಪ್ರಾರಂಭ:

"ಆಗ್ರಾದ ತಾಜಮಹಾಲ ನೋಡು. ಅಮೃತಸರದ ಬಂಗಾರದ ಗುಡೀನ ನೋಡು. ಸೌರಾಷ್ಟ್ರ ಸೋಮೇಶ್ವರನ ನೋಡು. ವಿಜಾಪುರದ ಗೋಳಗುಮಟ ನೋಡು. ಆದಿಲಶಾಹಿ ಕುತುಬ ಮಿನಾರ ನೋಡು. ಹಂಪಿ ಗಜಶಾಲೆ ನೋಡು. ರಾಯರ ಹಯಶಾಲೆ ನೋಡು. ಮಾನೋಮಿ ದಿಬ್ಬಾನ ನೋಡು. ರಾಯರ ಉಗ್ರಾಣ ಸಾಲೀನ ನೋಡು. ರಾಜ್ಯದ ಹುಚ್ಚಿಕೆ ನೋಡು. ವಿರೂಪಾಕ್ಷದೇವರ ಗುಡಿಯ ನೋಡು. ಬೇಲೂರ ಚೆನ್ನಕೇಶವನ ನೋಡು. ದೇಗುಲದ ಶಿಲ್ಪನ ನೋಡು. ಬೆಳುಗೊಳದ ಗೊಮ್ಮಟನ ನೋಡು. ಜಗದ ಮರ್ಜಿ ತಿಳಕೊ ಅಂತಾನ ಕೇಳು. ಹೇ, ಮೈಸೂರ ಅರಸರ ದಿವಾನ್ ಖಾನಿನ ನೋಡು. ಹೈದರಾಬಾದ ನವಾಬರ ದರ್ಬಾರ ನೋಡು. ಇಂದೂರ ರಾಜನಂಪತಿಗಳನ ನೋಡು. ಏನ ಚೆಂದ ಕಾಣ್ತಾರ ನೋಡು. ಕಾಠೇವಾಡದ ಕುದರೀನ ನೋಡು. ಕಚ್ಛದ ಕತ್ತೀನ ನೋಡು. ಅದರ ಕಿವೀನ ನೋಡು........ಹೇ, ಆಗಾಖಾನ್ ಅರಮನೆಯ ನೋಡು. ಏನ್ ಡೌಲ ಕಾಣ್ತೈತಿ ನೋಡು. ಆಗಾಖಾನ್ ಸಿರಿವಂತ

ನೋಡು. ಅವನ ಹೆಸರು ದೇಶದಾಗ ಮೆರಿತೈತಿ ನೋಡು........ಹೇ... ಹೇ.... ರಾಜಾರಾಣಿ ಗಮ್ಮತ್ ನೋಡು....ಏನ ಮಜಾ ತೋರ್ತೈತಿ ನೋಡು........"

ಆಗಾಖಾನ್ ಅರಮನೆಯ ಸುದ್ದಿ ಕಿವಿಯ ಮೇಲೆ ಬಿದ್ದ ಕೂಡಲೆ ನನ್ನ ಮನಸ್ಸು ಕನ್ನಂಬಾಡಿಯ ಕೋಡಿ ಹರಿದಂತೆ ದಾರಿ ಕಂಡ ಕಡೆ ಹರಿದು ಹೋಯಿತು. ಇಷ್ಟೊತ್ತಿನ ವರೆಗೆ ನಿಂತಿದ್ದವನು ಈಗ ಮಾತ್ರ ಕುಳಿತುಕೊಂಡೆ. ಕುಳಿತುದು ಅದೇ ಖೋಲಿಯಲ್ಲಿ. ಇದಿರಿನಲ್ಲಿ ರಾಜಾರಾಣಿ ದೇಖೋ ನೋಟಕ್ಕೆ ಮಾತ್ರ ತೋರುತ್ತಿದ್ದನು. ಅವನ ಹಾಡಿನ ಸಪ್ಪಳ, ಅವನ ತಮಾಷಾ ಡಬ್ಬಿ, ಆ ಮಕ್ಕಳು ಮಾತ್ರ ಕಾಣುತ್ತಿರಲಿಲ್ಲ. ಕುಳಿತಲ್ಲಿಯೆ ನಾನು ಕಲ್ಪನೆಯ ಗಮ್ಮತ್ ಪೆಟ್ಟಿಗೆ ತೆರೆದು ನೂರೊಂದು ಚಿತ್ರಗಳನ್ನು ನೋಡ ತೊಡಗಿದೆ. ಅದಕ್ಕೆ ಹಣ ಕೊಡಬೇಕಾಗಿರಲಿಲ್ಲ. ಹಣ ತೆತ್ತರೂ ಅಂತಹ ಜೀವಂತ ಚಿತ್ರಗಳನ್ನು ನೋಡುವ ಭಾಗ್ಯ ಅನೇಕರಿಗೆ ದೊರಕದು. ನೇರವಾಗಿ ದೇವನಿಂದ ತಂದ ಎರವಲು ಆ ಸಂಪತ್ತು. ಕಾಶ್ಮೀರದಿಂದ ಸಿಲೋನದ ವರೆಗೆ, ಕರಾಚಿಯಿಂದ ಕಲ್ಕತ್ತೆಯವರೆಗೆ ಬ್ರಿಟಿಷರ ಆಳಿಕೆಯ ಕಾಲದಲ್ಲಿ ನಡೆದ 'ಗಮ್ಮತ್'ನ್ನು ಒಂದೊಂದಾಗಿ ನೋಡತೊಡಗಿದೆ. ಅಮೃತಸರ ದುರಂತ, ಲಾಹೋರದ ಪ್ರಕರಣ, ಸೊಲ್ಲಾಪುರದ ಗೋಳೀಬಾರು; ಭಗತ್‌ಸಿಂಹ, ಠಾಕೂರಸಿಂಹ, ಧನಶೆಟ್ಟಿ ಮಲ್ಲಪ್ಪ, ಸಂಗೊಳ್ಳಿ ರಾಯಣ್ಣ, ಭಾಯಿ ಕೊತ ವಾಲ್, ಮೈಲಾರ ಮಹದೇವ, ಮಹೇಂದ್ರ ಚೌದರಿಯಂಥಹ ಆದರ್ಶ ಪುತ್ರರ ಗಲ್ಲು—ಛೀ........ಬರೀ ರಕ್ತದ ಕಾಲುವೆ ಹರಿಸಿದ ನರಮಾಂಸ ಭಕ್ಷ ಕರ ಹೊಲಸು ಕೃತ್ಯಗಳು ರಾಜರಾಣಿಯರ ಪೈಶಾಚೀ ನೃತ್ಯಕ್ಕೆ, ಲಯಕ್ಕೆ, ತಾಳಕ್ಕೆ ಶೃತಿಗೊಡುತ್ತ 'ದೇಖೋ ತಮಾಷಾ ದೇಖೋ' ಎನ್ನುತ್ತ ಒಂದರ ಮುಂದೊಂದು ಬಂದು ಎದೆಯ ರಕ್ತ ಕುದಿಸುತ್ತಿದ್ದವು. ಕಲಾಮಂದಿರಗಳನ್ನು ಕಟ್ಟಿಸುವದರ ಬದಲು ಕಲಾಪುತ್ರರನ್ನು ಬಂಧಿಸುವದಕ್ಕಾಗಿ ಸೆರೆಮನೆಗಳ ಉದ್ಘಾಟನಾ ಸಮಾರಂಭವನ್ನು ಸಾಹೇಬರ ಅಮೃತ ಹಸ್ತದಿಂದ ಅನಾವರಣ ಮಾಡಿಸುವದು; ಸ್ವಾತಂತ್ರ್ಯಕ್ಕಾಗಿ ಮೆಯ್ಮನತೆತ್ತ ಆದರ್ಶ ಮಕ್ಕಳ ಜೀವನ ಚರಿತ್ರೆಯನ್ನು ಮಾನವ ಕುಲ ಓದುವಂತೆ—ಹೆಮ್ಮೆಯಿಂದ ಓದುವಂತೆ—ಬರೆಯಿ ಸುವ ಏರ್ಪಾಡು ಮಾಡುವದನ್ನು ಬಿಟ್ಟು ಅವರ ಕೈ ಕಡಿದು, ಕಾಲು ಕತ್ತರಿಸಿ, ಕಣ್ಣು ಕೀಳಿಸಿ ಗುಲಾಮರ ಇತಿಹಾಸ ಕಾಣದಂತೆ ಮಸಿ ಹಚ್ಚಿದೆವೆಂದು ಹಿಗ್ಗಿ

ಹೊಗಳಿಕೊಳ್ಳುವದು; ಹೋಗಲಿ--ತಲೆಯ ಮೇಲೊಂದು ಗಾಂಧಿ ಟೋಪಿ ಹಾಕಿದರೆ, ಎದೆಯ ಮೇಲೊಂದು ಮೂರು ಬಣ್ಣದ ನಿಶಾನೆ ಹಚ್ಚಿಕೊಂಡರೆ, ಕೈಲೊಂದು ಧರ್ಮದಂಡ ಹಿಡಿದರೆ ಅನ್ಯಾಯವೆಂದು ಜಡಿದು 'ಆರ್ಯೀಕರಣಕ್ಕೆ' ತೊಡಗಿದ ಕೆಂಪು ಮುಖದವರ ಭೂತ ಚೇಷ್ಟೆಗಳು 'ಥೈ' 'ಥೈ' ಎಂದು ಕುಣಿಯುತ್ತ ಕುಡಿತದ ಮಬ್ಬಿನಲ್ಲಿ ತಲೆ ಕೆರಿಕೊಂಡು ಬೊಬ್ಬೆಹೊಡೆಯುತ್ತಿರುವ ದೃಶ್ಯಗಳು ಬಿರುಗಾಳಿಯಂತೆ ಬೀಸಿ ಬಂದು ನನ್ನ ಮನಸ್ಸನ್ನು ಜಗ್ಗಿ ಎಳೆದಾಡ ತೊಡಗಿದವು. ಬಂಗಾಲದ ಲಕ್ಷೋಪಲಕ್ಷ ಸಹೋದರರ ಸಾವಿನ ಚಿತ್ರ, ಮನೆಯುನಗಲಿ ಬೀದಿಯ ಭಿಕಾರಿಗಳಾಗಿ ತಿರುಗಿದ ವಿಜಯಪುರ ಬಾಂಧವರ ನೋಟ, ಹೊಟ್ಟೆಗಿಲ್ಲದೆ ಗೊಳೋ ಎಂದು ಮರುಗುತ್ತಿರುವ ಕೇರಳದ ಒಡಹುಟ್ಟಿದವರ ದೃಶ್ಯ ಒಂದು ಬದಿಯಲ್ಲಿ; ಇನ್ನೊಂದು ಪಕ್ಕದಲ್ಲಿ ಸಾಹೇಬರ ಬಾಲ ಹಿಡಿದು, ಬೂಟು ತಿಕ್ಕಿ, ಅರಿವೆ ಒಗೆದು ಹೊಟ್ಟೆತುಂಬ ಎಂಜಲ ಉಂಡು, ಕಂಠ ತುಂಬ ಕುಡಿದು ಬೀಗಿ ಬೀಗಿ ನಡೆಯುವವರ ಚಿತ್ರ; ಮತ್ತೊಂದೆಡೆಯಲ್ಲಿ ಬಡವರ, ದಲಿತರ, ಪತಿತರ, ಶ್ರಮ ಜೀವಿಗಳೆಲ್ಲ ತೊಟ್ಟು ಹರಿದ ಚಿಂದಿ ಚಿಂದಿಯಾದ ಅಂಗಿಯನ್ನು ಪುನಃ ಹರಿದು ಅವರ ಹರಕು ಕಿಸೆಯಲ್ಲಿದ್ದ ನಾಲ್ಕು ಕಾಸುಗಳನ್ನೂ ಕಸಿದುಕೊಳ್ಳುವ ಲಂಚಗುಳಿಗಳ ನೋಟ;ಕಳ್ಳ ಪೇಟೆಯಲ್ಲಿ ಜೋಳ, ರಾಗಿ, ಸೆಜ್ಜೆ, ಉಪ್ಪು, ಖಾರ, ಅರಿಸಿಣ, —ಬಡವನ ಹೊಟ್ಟೆಗೆ ಏನೆಲ್ಲ ಅವಶ್ಯವೊ ಅದನ್ನೆಲ್ಲ ಕಳ್ಳ ಪೇಟೆಯಲ್ಲಿರಿಸಿ ದುಡ್ಡು ಇದ್ದವರಿಂದ ದುಡ್ಡು ಸೆಳೆದು, ದುಡ್ಡಿಲ್ಲದವರನ್ನು ಗೋರಿಯಾಳದಲ್ಲಿ ನೂಕಿ, ಅವರ ಪ್ರೀತ್ಯರ್ಥಕ್ಕೆನ್ನುವಂತೆ ಹೋಳಿಗೆ ತುಪ್ಪ ಹೊಡೆದು ಎರಡೂ ದವಡೆಯಲ್ಲಿ ತಂಬಾಲ ಹಾಕಿಕೊಂಡು ಗಂಟಲದಗುಂಟ ತಂಬುಲ ರಸ ಹರಿಯಬಿಟ್ಟ ವ್ಯಾಪಾರಸ್ಥರ ನೋಟ ಮಗದೊಂದೆ- ಇಂತಿವೆಲ್ಲ ನೋಟ ಕಡಲ ತೆರೆಯಂತೆ ಭೋರ್ಗರೆದು ಬಂದು ಎದೆಯ ನಮುಕುತ್ತಿದ್ದವು. ನಾಲ್ವತ್ತೆರಡನೆಯ ಅಗಸ್ಟು ಒಂಭತ್ತನೆಯ ತಾರೀಖು--ನಾಡಿನ ತುಂಬೆಲ್ಲ ಗೋಳೀಬಾರು, ಗುಂಡಿನೇಟು, ಅಶ್ರುವಾಯು, ಟ್ಯಾಂಕ ಪ್ರಯೋಗ, ಬಾಂಬು ಪ್ರಯೋಗ— ಮಹದೇವ ಭಾಯಿಗಳ ಮರಣ, ಕಸ್ತೂರಿ ದೇವಿಯರ ಸಾವು, ಈಸೂರ್ ಪ್ರಕರಣ, ಅಷ್ಟಿ-ಚಿಮೂರು ದುರಂತ.............. ಹಾ, ಹಾ, ಗಮ್ಮತ್ ದೇಖೋ!........ರಾಜಾರಾಣಿ ದೇಖೋ........!

ನನ್ನ 'ಗಮ್ಮತ್ ಪೆಟ್ಟಿಗೆ'ಯ ಚಿತ್ರಗಳು ಹಾಗೆಯೆ ಒಂದರ ಮೇಲೊಂದು ವಾಯುವೇಗವಾಗಿ ಚಲಿಸುತ್ತ ಸಾಗಿರುವಾಗಲೆ ಪಾರ್ವತಿ ಬಂದು 'ಹೇ, ರಾಜಾರಾಣಿ ದೇಖೋ' ಎಂದು ನನ್ನ ಪ್ಯೆದಡವಿದಳು. ಕಲ್ಪನೆಯ ಇತಿಹಾಸದ ಪುಟಗಳು ಇನ್ನೂ ಹಾಗೆಯೇ ಉಳಿದಿದ್ದವು. ಅಷ್ಟಕ್ಕೆ ಗಮ್ಮತ್ ಪೆಟ್ಟಿಗೆಯ ಪರದೆಯನ್ನು ಇಳಿಬಿಟ್ಟು ಖೋಲಿಯ ಕಿಂಡಿಯೊಳಗಿಂದ ಹೊರಗೆ ನೋಡಿದೆ. ರಾಜಾರಾಣಿ ದೇಖೋ ಹುಡುಗರ ಬೆನ್ನು ತಟ್ಟಿ ಅವರನ್ನು ನಗಿಸಿ ತಾನೂ ನಗುತ್ತಿದ್ದ. ದುಡ್ಡು ತಂದ ಹುಡುಗರು ತಮಾಷೆ ನೋಡುವದಾದಮೇಲೆ ಅಲ್ಲಿ ನಿಂತಿದ್ದ ಹುಡುಗರೆಲ್ಲರಿಗೂ ಎರಡೆರಡು ನಿಮಿಷ ಪುಕ್ಕಟೆಯಾಗಿ ತೋರಿಸಿದ. ಆಗ ಆ ಮಕ್ಕಳಿಗಾದ ಹಿಗ್ಗನ್ನು ಈ ಮಾತಿನಲ್ಲಿ ಹಿಡಿದು ನಿಲ್ಲಿಸುವದು ಸಾಧ್ಯವಿಲ್ಲ.

ಎಲ್ಲರೂ ನೋಡುವದಾದಮೇಲೆ ರಾಜಾರಾಣಿ ದೇಖೋ ತನ್ನ ಪೆಟ್ಟಿಗೆಯನ್ನು ತಲೆಯಮೇಲಿಟ್ಟುಕೊಂಡು ಎರಡು ಹೆಜ್ಜೆ ಮುಂದಕ್ಕೆ ನಡೆದು 'ಹೇ, ರಾಜಾರಾಣಿ ದೇಖೋ, ಹೋಗಿ ಬರ್ತೇನಿ ನೋಡು. ಮುಂದಿನ ಸುಗ್ಗಿಗೆ ಬರ್ತೇನಿ ನೋಡು. ಹೊಸ ತಮಾಷಾ ತರ್ತೇನಿ ದೇಖೋ' ಎಂದು ತನ್ನ ಎಳೆಯ ಗೆಳೆಯರಿಗೆ ಹೇಳಿದ ಹುಡುಗರು ಅವನನ್ನು ತುಸು ದೂರ ಹಿಂಬಾಲಿಸಿ ನಂತರ ಒಬ್ಬೊಬ್ಬರೆ ಬೇರೆ ಬೇರೆಯಾಗಿ ತಂತಮ್ಮ ಮನೆಯ ಕಡೆಗೆ ಹೋದರು. ನಾನು ಹೊರಗೆ ಬಂದು ನೋಟಕ್ಕೆ ಮರೆಯಾಗುವನಕೂ ಅವನನ್ನು ನೋಡಿದೆ; ಬಿಡುಗಣ್ಣಿನಿಂದ ನೋಡಿದೆ. ಪಾರ್ವತಿಯೂ ನೋಡಿದಳು.

ಕೆಂಪೇರಿಯ ಹತ್ತಿರ ಸಾಗಿ ಬರುವ ಮುನ್ನ ದಾರಿಯ ಸಾಲು ಗಿಡಗಳಲ್ಲಿ ಅವನು ಮರೆಯಾದಾಗ ಅವನ ಬಗೆಗೆ ಮನದಲ್ಲಿ ವಿಚಾರ ಮೂಡಿಬಂದವು. ಅದೆನಿತೊ ವರುಷಗಳಿಂದ 'ರಾಜಾರಾಣಿ ದೇಖೋ'ನ ಪಂಗಡದವರು ನಮ್ಮ ನಾಡಿನ ಗುಡ್ಡ ಬೆಟ್ಟಗಳನ್ನಿಳಿದು, ಕೆರೆ ಕಾವಲಿಗಳನ್ನು ದಾಟಿ ಹಳ್ಳಿ-ಪಳ್ಳಿಗಳನ್ನು ಹೊಕ್ಕು ತಮ್ಮ ಉದ್ಯಮೆಯಿಂದ ಜನ ಮನವನ್ನು ರಂಜಿಸುತ್ತ ಬಂದ ಸಂಗತಿ; ಎಲ್ಲಿಯೋ ಒಂದುಕಡೆ ಮನೆ-ಮಕ್ಕಳನ್ನು ಬಿಟ್ಟು ತಾವು ಕಂಡ ಜನವೇ ಮನವೆಂದು, ತಾವು ಕಂಡ ಮನೆಯೆ ಓಲಗವೆಂದು ಭಾವಿಸಿ ಒಂದು

ಮಾತು ಬರದಂತೆ ನಿಷ್ಠೆಯಿಂದ ಕೆಲಸ ಮಾಡಿದ ಸಂಗತಿ; ಕಾಸು ತಂದಿರಿಸಿದ ಮಕ್ಕಳನ್ನು ದೇವರೆಂದು ಬಗೆದು ಅವರನ್ನು ವಿಶ್ವಾಸದಲ್ಲೆತ್ತಿಕೊಂಡು ತಮಾಷಾ ತೋರಿಸಿ ಅವರ ಮನಸ್ಸನ್ನು ಕಾವ್ಯದಂತೆ ಹಸನುಗೊಳಿಸುವ ಅವರ ಜೀವನ ರೀತಿ ನನ್ನ ಚಿತ್ತ ಭಿತ್ತಿಯ ಮೇಲೆ ಸುಳಿಯತೊಡಗಿದವು.

ಎರಡು ವರುಷಗಳ ಹಿಂದೊಮ್ಮೆ ಸುಗ್ಗಿ ಮುಗಿದಮೇಲೆ ಬಂದ ರಾಜಾ ರಾಣಿ ದೇಖೋನನ್ನು ನಮ್ಮೂರ ಹುಡುಗರು 'ಸುಗ್ಗಿ ತಡಮಾಡಿ ಬಂತೇ ? ನೀನು ತಡಮಾಡಿ ಬಂದೆಯೇ ?' ಎಂದು ಕೇಳಿದುದಕ್ಕೆ 'ಊರಲ್ಲಿ ಬರ ಗಾಲ. ಹೆಂಡತಿ ಸತ್ತಳು. ಮಗಳು ಏಳು ವರುಷದವಳನ್ನು ಇನ್ನೊಬ್ಬರ ಮಡಿಲಲ್ಲಿಟ್ಟು ಊರೂರು ತಿರುಗುತ್ತ ಬರುವಾಗ ತಡವಾಯಿತು' ಎಂದು ಹೇಳುತ್ತ ಅಳುನುಂಗಿ ನಕ್ಕು ನುಡಿದುದೂ ನೆನಹಿಗೆ ಬಂದಿತು. ಆ ಮೇಲೆ ಒಂದು ವರುಷದ ನಂತರ ಬಂದಾಗ ಅವನ ಮನೆತನದ ವಿಚಾರವಾಗಿ ನಾನು ಕೇಳಿದಾಗ ಇದ್ದೊಬ್ಬ ಮಗಳನ್ನು ಕಾಲದವಡೆಯಲ್ಲಿರಿಸಿಕೊಂಡು ಹೋದು ದನ್ನು 'ರಾಜಾರಾಣಿ ದೇಖೋ' ಹನಿಗಣ್ಣು ಹಾಕುತ್ತ ತಿಳಿಸಿದುದೂ ನೆನಪಾಯಿತು.

ಆ ಕಾಲಕ್ಕೆ ಸರಿಯಾಗಿ ಮೀನಿಯ ತಂದೆಯನ್ನು, ಮೀನಿಯನ್ನೂ ಕೊನೆಯ ಬಾರಿಗೊಮ್ಮೆ ನೋಡಿ 'ನಮಸ್ಕಾರ. ಹೋಗಿಬರುತ್ತೇನೆ' ಎಂದು ಹೇಳಿ ಅಫಗಾನಿಸ್ತಾನಕ್ಕೆ ಮಗಳನ್ನು ಕಾಣಲೆಂದು ಹೊರಟ ಕಾಬೂಲಿ ವಾಲಾ ರಹಮಾನನ ಚಿತ್ರ ಕಣ್ಣೆದುರಿನಲ್ಲಿ ಬಂದು ನಿಂತಿತು. ಆಗ ಮನಸ್ಸಿ ನಲ್ಲಿಯೇ 'ರಾಜಾರಾಣಿ ದೇಖೋನನ್ನು ರಹಮಾನನಿಗೆ ಹೋಲಿಸಲೇ ?' ಎಂದುಕೊಂಡೆ.

ಹೋಲಿಕೆ ಗಾತ್ರದಲ್ಲಿ ಬೇರೆಬೇರೆ; ಆದರೂ ಆತ್ಮ ಒಂದೇ ! ಮುಳು ಗುವ ರವಿಯ ಹೊಂಗಿರಣ ನಮ್ಮೂರ ಕೆಂಪೇರಿಯ ಮೇಲೆ ಹರಹಿದ್ದವು. ಸಾಲು ಗಿಡಗಳನ್ನು ದಾಟಿ, ಕೊತ್ತುಂಬರಿ ಮಡಿಯನ್ನು ಹಿಂದೆಬಿಟ್ಟು ಕೆಂಪೇ ರಿಯ ಮೇಲೆ 'ರಾಜಾರಾಣಿ ದೇಖೋ' ಏರಿಬಂದು ಮುಂದು ಮುಂದಕ್ಕೆ ಸಾಗಿದುದನ್ನು ಕಂಡೆ. ಅದೊಂದು ರೇಖಾಚಿತ್ರ. ತಲೆಯ ಮೇಲೊಂದು ಗಮ್ಮತ್ ಪೆಟ್ಟಿಗೆ ಇಟ್ಟುಕೊಂಡು ಬಲಗೈ ಬೀಸುತ್ತ ಬೀಸಾಗಿ ಕಾಲು

ಹಾಕುತ್ತ ಹೊರಟ ಅವನ ರೇಖಾಚಿತ್ರ ನನ್ನ ಕಣ್ಮುಂದೆ ಇಂದೂ ನಿಂತಿದೆ.

ಪಾರ್ವತಿ ಅಂದು ಕಂಡ ನೋಟ ಅಂದಿಗೆ ಕೊನೆಯದಾಯಿತು. ಅವಳು ಮೇಲಿನ ಲೋಕದಲ್ಲಿ ನಡೆದಿರಬಹುದಾದ ತಮಾಷಾ ನೋಡಲಿಕ್ಕೆ ಹೋದಳು. ಅಲ್ಲಿಯೂ ರಾಜಾರಾಣಿ ದೇಖೋ ಇರಬಹುದೇನು ?

ಓದುಗ, ರಾಜಾರಾಣಿ ದೇಖೋನನ್ನು ನಾನು ಮತ್ತೆ ತಿರುಗಿ ಪ್ರತ್ಯಕ್ಷ ವಾಗಿ ಕಂಡಿಲ್ಲ. ವಿಜಾಪುರ ಜಿಲ್ಲೆಯಲ್ಲಿ ಒಂದು ಹಳ್ಳಿ ( ಅದರ ಹೆಸರು ಮರೆತುಹೋಗಿದೆ !) ಹುಟ್ಟಿದೂರೆಂದು ಅವನು ನನಗೆ ಹೇಳಿ ಹೋಗಿದ್ದಾನೆ. ನಿಲವು ಎತ್ತರ. ಸುಕ್ಕುಬಿದ್ದ ಗಲ್ಲ. ಮುಖದಮೇಲೆ ಒಡೆದು ಕಾಣುವ ಮೀಸೆ. ಕಣ್ಣು ಅಚ್ಚ ಕಪ್ಪು. ಸಣ್ಣ ಹಣೆ. ಅದರಮೇಲೆ ದಪ್ಪಾಗಿ ಎದ್ದು ತೋರುವ ಮೂರುಗೆರೆ—ಅವುಗಳ ನಡುವೆ ಅರ್ಧ ಮೂಡಿರುವ ಇನ್ನೊಂದು ಗೆರೆ. ಮುಖದಲ್ಲಿ ನಗುವಿಲ್ಲ. ನೋಟದಲ್ಲಿ ಮಾತ್ರ ಒಲವಿನ ಹೊನಲುಂಟು. ರುಮ್ಮಾಲು ತಲೆತುಂಬ ಸುತ್ತಿರುತ್ತಾನೆ. ಅದರಿಂದಾಗಿ ಕೂದಲು ಕಾಣಿಸುವು ದಿಲ್ಲ. ಲುಂಗಿ ಸುತ್ತಿರುತ್ತಾನೆ. ಅಂಗಿಯ ತೋಳು ಏರಿಸಿರುತ್ತಾನೆ. ಬರಿ ಗಾಲಿನಿಂದ ನಡೆಯುತ್ತಿರುತ್ತಾನೆ. ತಲೆಯ ಮೇಲೆ ಸಿಂಬಿ ಇಟ್ಟು ಅದರ ಮೇಲೆ ಗಮ್ಮತ್ ಪೆಟ್ಟಿಗೆ ಹೇರಿಕೊಂಡು ನಿಡಿದಾದ ಹೆಜ್ಜೆಗಳನ್ನು ಒಂದೇ ಸವನೆ ಹಾಕುತ್ತಿರುತ್ತಾನೆ.

ನೀನು ದಾರಿಯಲ್ಲಿ ಎಲ್ಲಿಯಾದರೂ ಮೇಲೆ ಹೇಳಿದ ಗುರುತಿನ ರಾಜಾ ರಾಣಿ ದೇಖೋನನ್ನು ಕಂಡರೆ ನಾನು ಅವನನ್ನು ನೆನೆಯುತ್ತಿದ್ದೇನೆಂದು ಹೇಳು. ರಾಜಾರಾಣಿ ದೇಖೋನ ಆಣೆ;ಮರೆಯದೆ ಹೇಳಪ್ಪ !

---

# ಪೋಸ್ಟ್‌ಮನ್ ರಾಮಣ್ಣ !

●

' ಮಾಸ್ತರೇ '

' ಯಾರವರು ? '

' ನಾನು ಮಾಸ್ತರೇ '

ನಾವೆಲ್ಲ ಊಟಕ್ಕೆ ಕುಳಿತಿದ್ದೆವು. ಅಪ್ಪನೂ ಊಟಕ್ಕೆ ಕುಳಿತಿದ್ದರು. ' ನಾನು ಮಾಸ್ತರೇ ' ಎಂದು ಹೊರಗಿನಿಂದ ಬಂದ ದನಿಯು ನಮಗೆ ತೀರ ಪರಿಚಯದ್ದಾಗಿ ತೋರಿತು. ತಾಯಿ ಎಡೆ ಮಾಡುವುದನ್ನು ನಿಲ್ಲಿಸಿ ಹೊರಗೆ ಬಂದವರನ್ನು ನೋಡಲು ಹೋದರು. ಬಂದವನು ಪೋಸ್ಟಮನ್ ರಾಮಣ್ಣ ಎನ್ನುವುದು ಒಡನೆಯೆ ಗೊತ್ತಾಯಿತು, 'ಬಾ ರಾಮಣ್ಣ, ಎಲ್ಲರೂ ಊಟಕ್ಕೆ ಕುಳಿತಿದ್ದಾರೆ ಊಟಮಾಡೇಳಪ್ಪ, ಎಂದು ತಾಯಿ ಕರೆದರು. ರಾಮಣ್ಣ ಕುಳಿತಲ್ಲಿಂದ ಏಳಲೇ ಇಲ್ಲ. ತಾಯಿ ಎಷ್ಟು ಕರೆದರೂ ಆತ ಒಪ್ಪದೆ ಕೊನೆಗೆ ನೀರು ಕುಡಿಯುವುದಕ್ಕೆ ಸಮ್ಮತಿ ಕೊಟ್ಟ. ನೀರು ಕುಡಿದು ಬಳಲಿಕೆಯ ನೀಗಿ ಹಾಯಾಗಿ ಆತ ಕುಳಿತುಕೊಳ್ಳುವಷ್ಟರಲ್ಲಿ ನಾವೆಲ್ಲ ಊಟ ಮುಗಿಸಿ ಹೊರಗೆ ಬಂದೆವು.

ರಾಮಣ್ಣನ ಮುಖ ಸಣ್ಣದಾಗಿತ್ತು; ತೀರ ಸಣ್ಣದಾಗಿತ್ತು. ಎಂದಿನಂತೆ ಅವನ ಮೊಗದಲ್ಲಿ ಎದ್ದು ತೋರುವ ನಗೆಯ ಕಿರಣ ಅಡಗಿಹೋಗಿದ್ದವು. ನಮ್ಮ ಮನೆಗೆ ಟಪ್ಪಾಲು ತಂದಾಗೊಮ್ಮೆ ತಾನು ಈ ಮೊದಲು ಅನುಭವಿಸಿದ ಸಂಗತಿಗಳನ್ನೆಲ್ಲ ಒಂದೊಂದಾಗಿ ಉಸಿರು ನಿಲ್ಲಿಸದೆ ಬಣ್ಣಿಸಿ ಬಣ್ಣಿಸಿ ಹೇಳುತ್ತಿದ್ದ ರಾಮಣ್ಣನ ಸ್ವಭಾವ ಅಂದು ಮಾತ್ರ ತುಸು ವಿಚಿತ್ರವಾಗಿಯೆ ತೋರಿತು. ಅಂತೂ ಔಪಚಾರಿಕವಾಗಿ ಆ ಮಾತು, ಈ ಮಾತು ಆಡಿ ತನ್ನ ಚೀಲದಿಂದ ಒಂದು ಲಕ್ಕೋಟೆಯನ್ನು ತೆಗೆದುಕೊಟ್ಟವನೆ ಹೊರಡಲು ಮೇಲಕ್ಕೆದ್ದ. ಅದಂತೂ ರಾಮಣ್ಣನ ಮನಸ್ಸಿನ ಹೋರಾಟವನ್ನು ಒಮ್ಮೆಲೆ ವ್ಯಕ್ತ

ಪಡಿಸಿತು. ನನ್ನ ಬಲವತ್ತರದ ಆಶಯದ ಮೇರೆಗೆ ರಾಮಣ್ಣಾ ಬಗಲಿಗೆ ಹಾಕಿಕೊಂಡಿದ್ದ ಚೀಲವನ್ನು ಮತ್ತೆ ಇಳಿಸಿ ಉಸಿರೆಳೆದು ಕುಳಿತುಕೊಂಡ.

ಅಷ್ಟೊತ್ತಿಗೆ ಲಕ್ಕೋಟೆಯನ್ನು ಓದಿ ಮಾಸ್ತರರ ಕಣ್ಣಿನಲ್ಲಿ ನೀರು ಊರಿ ಬಂದಿತು ಆರು ಮಕ್ಕಳನ್ನು ಕಳೆದುಕೊಂಡಮೇಲೆ ಮತ್ತೆ ಅವರು ಕಣ್ಣೀರಿಟ್ಟುದು ಇದೇ ಮೊದಲನೆಯ ಸಾರೆ. ಹಸುವಿನ ಹೃದಯವನ್ನು ಇರಿಯುವ ಕಟುಗನಿಗೆ ನ್ಯಾಯಾಪನ್ಯಾಯಗಳು ಎಲ್ಲಿಂದ ಬಂದಾವು ?

ಕಟುಕ ವೇದವನೋದಿದರೇನು ? ಚಂಡಾಲ ವಿಪ್ರನಾದರೇನು ? ಬಸ ವಣ್ಣನವರು ಅಂದಂತೆ ಶೀಲದಿಂದ ಯೋಗ್ಯತೆಯಲ್ಲದೆ ಜಾತಿಯಿಂದಲ್ಲ. ಇದೇನು ತತ್ವ ಅನ್ನುತ್ತೀರಾ? ತತ್ವ ಅಲ್ಲವಪ್ಪ! ನಿಮಗೆ ತಿಳಿಯದು. ನೊಂದ ಹೃದಯದ ಬಿಸಿಯುಸಿರು ಅದು. ಲೋಕದಲ್ಲಿ ವಿಪ್ರರೆಂದೆನ್ನಿಸಿ ಕೊಳ್ಳುವ ಹಿರಿಯರೇ ಎಸಗುವ ಪಾತಕ ಕೃತ್ಯಗಳನ್ನು ನೆನಸಿಕೊಂಡರೆ ದೇಹದ ನೆತ್ತರೆಲ್ಲ ಚಳವಳ ಕುದಿಯುತ್ತದೆ ಕಾರಣ ಕೇಳುತ್ತೀರಾ ? ಇಗೋ ಹೇಳಬಲ್ಲೆನಪ್ಪ !

ನನ್ನ ಬೆನ್ನ ಮೇಲೆ ಹುಟ್ಟಿದ ಎರಡನೆಯ ತಮ್ಮ ಶಿವನೆಂಬಾತನನ್ನು ನಮ್ಮೂರಿನಿಂದ ಹತ್ತು ಮೈಲಿಗಳಾಚೆಗಿರುವ ಕಳಸಕ್ಕೆ ಶಾಲೆಗೆಂದು ಕಳುಹಿಸಿ ದೆವು. ಸುತ್ತಣ ಹಳ್ಳಿಯಲ್ಲಿ ಕನ್ನಡ ಏಳನೆಯ ತರಗತಿ ಇಲ್ಲ. ಶಿಗ್ಗಾವಿ ತಾಲೂಕಿನ ಸ್ಥಳವಾದರೂ ಅದೊಂದು ಕುಗ್ರಾಮ. ಕಳಸಕ್ಕೆ ಕಲಿಯಲೆಂದು ಹೋದ ಶಿವನು ಒಂಬತ್ತು ತಿಂಗಳು ಓದು ಮುಗಿಸಿಕೊಂಡು ಊರಿಗೆ ಬಂದ ವನೆ ಮಸಣಗಟ್ಟಿ ಸೇರಿದ ಕಳಸದಲ್ಲಿ ಒಂಬತ್ತು ತಿಂಗಳು ವನವಾಸ ಉಪ ವಾಸ ಕಳೆದು ಓದು ಮುಗಿಸಿ ಪರೀಕ್ಷೆಯಲ್ಲಿ ಯಶಸ್ಸು ಸಂಪಾದಿಸಿ ಮನೆ ಯಿಂದ ಮಸಣಕ್ಕೆ ನಡೆದ ಅವನ ಕಥೆಯನ್ನು ನೆನಸಿಕೊಂಡರೆ ರಾತ್ರಿ ನಿದ್ರೆ ಬಾರದು. ಹಸಿದು ಅನ್ನದ ಬಳಿ ಕುಳಿತರೆ ಹಾಲಾಹಲ ನುಂಗಿದಂತಾಗುವುದು. ಅದೇ ಊರಿಗೆ ಶಿವನ ಅಪ್ಪನನ್ನು ವರ್ಗಾಯಿಸಿದರು !

ಮೇಲಿನ ಅಧಿಕಾರಿಗಳಿಗೆ ಹೇಳಿಕೊಂಡರಿಲ್ಲ. ಮನದ ನೋವು ತೋಡಿ ಕೊಂಡರಿಲ್ಲ ಪ್ರಪಂಚದ ಪರಿತಾಪಗಳನ್ನು ಬಿಚ್ಚಿ ಬಿಚ್ಚಿ ಹೇಳಿದರೂ ತುಸು ಕಿವಿಗೊಟ್ಟು ಮರುಗಿ ದುಃಖ ವ್ಯಕ್ತಪಡಿಸುವವರಿಲ್ಲ. ಸ್ವಾರ್ಥ, ವಂಚನೆ,

ಮೋಸ, ಕಾಪಟ್ಯ, ಲಂಚಗುಳಿತನ, ಅನಾಚಾರ-ಇವೇ ಹಿರಿಯರೆಂದೆನ್ನು ವವರಲ್ಲಿ ಮನೆ ಮಾಡಿಕೊಂಡ ಮೇಲೆ ಸಾಮಾನ್ಯರು ಏನು ಅಡವಿ ಸೇರಿ ಶಿಲಾ ಯುಗದ ಕಾಡು ಮನುಷ್ಯರಂತೆ ಬದುಕಬೇಕೆ ? ತಮ್ಮ ಪಾಲಿನ ಕೆಲಸವನ್ನು ಮನಮುಟ್ಟಿ ಮಾಡಿದವರಿಗೆ ಈ ಲೋಕದಲ್ಲಿ ಬದುಕಿ ನೆಲೆಗೊಂಡು ನಿಲ್ಲಲು ಅಧಿಕಾರ ಇಲ್ಲವೇನು ?

'ಬೆವರು ಸುರಿಸಿ, ರಕ್ತ ಸುಟ್ಟು ಒಪ್ಪಿಸಿಕೊಟ್ಟ ಕಾರ್ಯವನ್ನು ಶ್ರದ್ಧೆ ಯಿಂದ ಮಾಡುವವರನ್ನು ಇಲ್ಲಿ ಮೆಚ್ಚುವವರಿಲ್ಲ ಮಾಸ್ತರೇ ?' ರಾಮಣ್ಣ ಬಾಯಿಬಿಟ್ಟ

'ನಾನು, ನೀನು ಅಂದರೆ ಮೇಲಿನವರ (ಅಧಿಕಾರಿಗಳ !) ಕಣ್ಣಲ್ಲಿ ಹೊಟ್ಟೆಗಾಗಿ ಹೊಸೆಯುವ ಹುಳನೋಡು, ರಾಮಣ್ಣ !'

'ಇಲ್ಲ. ನಮಗೂ ಒಂದು ಕಾಲ ಬಂದೀತು. ಹಸಿವೆಯಿಂದ ನೊಂದು ನರಲುವವರೆ ನಾಳೆ ಲೋಕದ ಗುಡಿ ಕಟ್ಟಿ ನಂದಾದೀವಿಗೆ ಇಟ್ಟಾರು, ಮಾಸ್ತರೇ'

'ರಾಮಣ್ಣಾ, ಆ ಆಶಾವಾದ ನಮಗೆ ಖಂಡಿತ ಬೇಕು. ನಾವು ಹೋರಾಡುತ್ತ ಮಡಿದ ಮಸಣಭೂಮಿಯ ಮೇಲೆ ನಮ್ಮ ಮಕ್ಕಳು ಸೌಧಕಟ್ಟಿ ನಲಿಯಲೆಂಬ ಆಸೆ ನಿಜಕ್ಕೂ ಬೇಕು. ಅದರೆ ಅದೊಂದು ದೊಡ್ಡ ತಾಳ್ಮೆ.'

'ಹೋರಾಡೋಣ. ಸತ್ತಾದರೂ ಗೆಲ್ಲಬೇಕು.'

ಪೋಸ್ಟಮನ್ ರಾಮಣ್ಣ, ಮಾಸ್ತರು ಇಬ್ಬರೂ ಮಾತನಾಡುತ್ತಿದ್ದು ದನ್ನು ಮೈ ಕಿವಿಯಾಗಿ ಕೇಳಿದೆ.— ನಾಡಿನ ಸ್ಕೂಲಬೋರ್ಡ ಆಫೀಸಿ ನವರೂ, ಪೋಸ್ಟಲ್ ಡಿಪಾರ್ಟಮೆಂಟಿನ ಅಧಿಕಾರಿಗಳೂ ಕೆಳಗಿನ ನೌಕರರ ಮೇಲೆ ನಡೆಸಿದ್ದ ಅನ್ಯಾಯ, ಮೋಸ, ವಂಚನೆ, ದುರ್ನಡತೆಗಳ ಬಗ್ಗೆ ಅಲ್ಲ ಲ್ಲಿಯ ಜನರ ಬಾಯಿಂದ ಈ ಮೊದಲು ಕೇಳಿ ತಿಳಿದುಕೊಂಡಿದ್ದೆ. ನೌಕರಿ ಗೆಂದು ಬಂದ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡುವ ಪ್ರೆಸಿಡೆಂಟ, ವರ್ಗಾಯಿಸಲು ಪ್ರಾರ್ಥನೆ ಮಾಡಿಕೊಳ್ಳಲೆಂದು ಬಂದ ಶಿಕ್ಷಕನಿಂದ ಹಣದ ರೂಪದಲ್ಲೋ, ಪದಾರ್ಥಗಳ ರೂಪದಲ್ಲೋ ಲಂಚ ಕೊಳ್ಳುವ ಎ. ಓ, ಪಗಾರ ಕಿರುಕುಳ ರಜೆಯ ಬಗ್ಗೆ ವಿಚಾರ ಮಾಡಲೆಂದು ಬಂದ ಮಾಸ್ತರರಿಗೆ ಬೈಗುಳ

ಹುವ್ವನ್ನೊ, ಅಪಮಾನದ ಉಡುಗರೆಯನ್ನೊ ಅರ್ಪಿಸುವ ಕಾರಕೂನರು– ಇವರ ಬಗ್ಗೆ ನೂರೊಂದು ಕತೆ ಕೇಳಿದ್ದೆ. ಸುಂದರ ಕೈದೋಟಗಳಿಂದ ಸಿಂಗಾರವಾಗಿರುವ ಬಂಗ್ಲೆಯಲ್ಲಿ ಕುಳಿತುಕೊಂಡು ಅಧಿಕಾರಿ ವರ್ಗದಲ್ಲಿದ್ದ ಪಿಶಾಚಿಗಳು ಪುಣ್ಯಭೂಮಿಯ ದರಿದ್ರ ಹಳ್ಳಿಗಳಲ್ಲಿ ಚಿಂದಿ ಚಿಂದಿಯಾದ ಬಟ್ಟೆಯನ್ನುಟ್ಟುಕೊಂಡು ಹಗಲು ರಾತ್ರಿ ಮೈ ಬೆವರು, ದೇಹದ ನೆತ್ತರನ್ನು ತುತ್ತು ಕೂಳಿಗಾಗಿ, ಹಿಡಿ ಸಂಬಳಕ್ಕಾಗಿ ಹರಿಸುತ್ತಿರುವ ಶ್ರಮಜೀವಿಗಳ ಮೇಲೆ ನಡಸುತ್ತಿರುವ ಅನ್ಯಾಯವನ್ನು ಈ ಕ್ಷಣ ನಿಜವಾಗಿ ಅರಿತುಕೊಂಡೆ.

ಪೋಸ್ಟಮನ್ ರಾಮಣ್ಣ–ಅಲ್ಲ–ನಮ್ಮ ಮನೆಯ ರಾಮಣ್ಣ, ಮಾಸ್ತರು ಇಬ್ಬರೂ ಕಂಠಸ್ತಂಭಿತವಾಗಿ ಒಬ್ಬರ ಇದಿರೊಬ್ಬರು ಕುಳಿತುಕೊಂಡುದನ್ನು ನಾನು ದಿಙ್ಮೂಢವಾಗಿ ನೋಡಿದೆ !

ಲಕ್ಕೋಟಿಯನ್ನು ಒಂದು ಸಲ ಓದಿದರು. ಎರೆಡು ಸಲ ಓದಿದರು. ಮೂರನೆಯ ಬಾರಿಗೆ ಓದುತ್ತಿದ್ದಂತೆಯೇ ಕಣ್ಣುಗಳಿಂದ ನೀರು ಪನಿಪನಿಯಾಗಿ ಬಿದ್ದು ಲಕ್ಕೋಟಿಯನ್ನು ನೆನೆಯಿಸಿದುವು. ರಾಮಣ್ಣ ತನ್ನ ರುಮಾಲಿನ ಚುಂಗಿನಿಂದ ಕಣ್ಣನ್ನು ಒರೆಸಿಕೊಂಡು 'ಹೋಗಿ ಬರುತ್ತೇನೆ' ಎನ್ನುವಷ್ಟು ವಿನಯವನ್ನೂ ತೋರದೆ ಒಮ್ಮಿಂದೊಮ್ಮೆಲೆ ಎದ್ದು ಹೋದ. ಹೊಸ್ತಿಲ ದಾಟಿ ಹೋಗಿ ರಾಮಣ್ಣನನ್ನು ನಾನು ನೋಡಿದೆ.

ಪೋಸ್ಟಮನ್ ರಾಮಣ್ಣ ಹೆಗಲಿಗೆ ಪೋಸ್ಟಿನ ಚೀಲ ಹಾಕಿಕೊಂಡು ತಲೆಯ ರುಮಾಲನ್ನು ಅಸ್ತವ್ಯಸ್ತವಾಗಿ ಸುತ್ತಿಕೊಂಡು ತತ್ತರವೆತ್ತರ ಕಾಲು ಹಾಕುತ್ತ, ಸಿಕ್ಕ ಸಿಕ್ಕ ಹಾಗೆ ಕೈಬೀಸುತ್ತ ಕುಂಬಾರ ಆವಿಗೆ ದಾಟಿ, ಗೌಡರ ತೋಟ ದಾಟಿ ಕೆಂಪೇರಿಯನ್ನೇರಿ ಮುಂಗಕ್ಕೆ ಸಾಗಿ ಹೋಗುವುದನ್ನು ಕಂಡಾಗ ನನಗೆ ರಾಜಾರಾಣಿ ದೇಖೋನ ನೆನಹು ಆ ಕ್ಷಣ ರಭಸದಿಂದ ಮೂಡಿ ಬಂದಿತು.

ಕವಿ, ಪ್ರೇಮಿ, ಹುಚ್ಚ ಇದ್ದ ಹಾಗೆ ಮಾಸ್ತರು, ಪೋಸ್ಟಮನ್, ರಾಜಾ ರಾಣಿದೇಖೋ ! ಅವರ ವ್ಯಕ್ತಿತ್ತ್ವ ನೋಡುವವರ ದೃಷ್ಟಿಕೋನಕ್ಕೆ ತಕ್ಕಂತೆ ಹಿರಿಮ ಕಿರಿದಾಗುವುದು. ಸತ್ಯ, ಸೇವೆ, ತ್ಯಾಗ, ಧರ್ಮಗಳ ಬೆನ್ನು ಹತ್ತಿದ ಕುಲಜರನೇಕರು ತಮ್ಮ ಕಾಲದ ಜನರಿಂದ ಅನ್ಯಾಯ, ಅಪಮಾನ,

ಹಿಂಸೆಗಳಿಗೀಡಾಗಲಿಲ್ಲವೇನು ? ನಿಜ, ಆದರು. ಆಷಾಢಭೂತಿಗಳಿಗೆ ಅವರ ವ್ಯಕ್ತಿತ್ವ ಕಿರಿದಾಗಿಯೇ ತೋರಿತು. ಆದರೆ ಜಗತ್ತಿನಲ್ಲಿ ಗೆಲ್ಲುವುದು, ಸ್ಥಿರವಾಗಿ ನಿಲ್ಲುವುದು ಯಾವುದು ? 'ಋತವೊಂದೆ ಗೆಲ್ಲುವುದು, ಅನೃತವಲ್ತು; ಅಮೃತಮೆನೆ ವಿದ್ಯೆಯೆ; ಅವಿದ್ಯೆಯಲ್ತು. ವಿಶ್ವಭಾರತಿ ಶರಣು; ಕಿರುತೀರ್ಥವಲ್ತು ' ಎಂದು ಕವಿ ಹೇಳಿದ ಮಾತು ಎಂತು ತೊದಲಾದೀತು ? ವಿಶ್ವಭಾರತಿಯ ಸತ್‌ಪುತ್ರರು, ಅಮೃತಮಾತೆಯ ಆ ಅಮೃತ ಮಕ್ಕಳು ಮಾಸ್ತರು, ರಾಜಾರಾಣಿ ದೇಖೋ, ಪೋಸ್ಟಮನ್—ಅವರಂತಹ ಶ್ರಮಜೀವಿಗಳು ಕಾರ್ಮಿಕರು, ಅವರೆಲ್ಲರ ವ್ಯಕ್ತಿತ್ವ ಎಂತು ಕಿರಿದಾದೀತು !

ಕೆಂಪು ಅಂಚಿನ ರುಮಾಲು ಸುತ್ತಿ, ಕಾಕಿಯ ಅಂಗಿ ತೊಟ್ಟು, ಅರ್ಧಚಣ್ಣ ಹಾಕಿಕೊಂಡು ಬರಿಗಾಲಿನಿಂದ ನಡೆದು ಹೋಗುತ್ತಿರುವ ಪೋಸ್ಟಮನ್ನನನ್ನು ನೋಟ ಮರೆಯಾಗುವವರೆಗೂ ನೋಡಿದೆ. ರಾಮಣ್ಣ ವಿಶಾಲ ಜಗತ್ತಿನಲ್ಲಿ ವಿಶ್ವಕರ್ಮನ ನಂಬುಗೆಯ ಅಣುರೇಣುವಿನಂತೆ ಉಳಿದೆಲ್ಲ ಕಣಗಳಲ್ಲಿ ಕರಗಿ ಲೀನವಾಗಿ ಹೋದ ರಾಮಣ್ಣನಂತಹರು ಈ ಭೂಮಿಯಮೇಲೆ ಇನ್ನೂ ಇರುವವರಿಂದ ಏನೋ ಸೂರ್ಯ ಚಂದ್ರರು ತಮ್ಮ ಗತಿ ಬದಲಾಯಿಸಿಲ್ಲವೆಂದು ತೋರುತ್ತಿದೆ !

* * * *

ಮಾಸ್ತರರಿಗೆ ವರ್ಗವಾದ ಆರುತಿಂಗಳಲ್ಲಿ ದೇಶದಾದ್ಯಂತ ಶಿಕ್ಷಕರು ಸಂಪು ಹೂಡಿದರು ಸಂಪು ಹೂಡಿದ ಮರುದಿನವೆ ಅವರು ಕಳಸದಿಂದ ಹೊರಟು ಹಿರೇಮಲ್ಲೂರಿಗೆ ಬಂದರು. ಸಂಪು ಹೂಡಿದೆವೆಂಬ ಹುರುಪು ಅವರ ಇಳಿ ವಯಸ್ಸಿನಲ್ಲಿ ಹೆಜ್ಜೆ ಹೆಜ್ಜೆಗೂ ಎದ್ದು ತೋರುತ್ತಿತ್ತು.

ಮಲ್ಲೂರಿಗೆ ಬಂದ ನಾಲ್ಕು ದಿನಗಳಲ್ಲಿ ಅವರು ಹೊಸದೊಂದು ಕಾರ್ಯಕ್ರಮವನ್ನೇ ಹೂಡಿದರು. ಊರಿಗೆ ದಿನ ಪತ್ರಿಕೆ ಬರತೊಡಗಿತು. ವಾಚನಾಲಯ ರೂಪುಗೊಂಡಿತು. ರೈತ ಸಂಘಟನೆ ಮಾಡಿದರು. ರಾಷ್ಟ್ರೀಯ ಸಪ್ತಾಹ ನಡೆಸಿದರು. ಮನೆ ಮನೆಗಳ ಜಂತಿಯ ಮೇಲಿಟ್ಟ ರಾಟಿಯನ್ನು ಕೆಳಗಿರಿಸಿ ಹೆಣ್ಣುಮಕ್ಕಳಿಗೆ ನೂಲಲು ಹೇಳಿದರು. ಸತ್ಯಾಗ್ರಹ ದೀಕ್ಷೆ ಮುಪ್ಪಿನವರಲ್ಲೂ ತಾರುಣ್ಯದ ತೇಜಸ್ಸನ್ನು ತುಂಬುತ್ತದೆಯೆಂದು ಗಾಂಧೀಜಿ ಹೇಳಿದ ಮಾತು ನನಗೆ ಈಗ ಅರ್ಥವಾಯಿತು. ಹೌದು. ನಮ್ಮ ಬಾಳು ಅನುಭವದ

ಕುಲುಮೆಯಲ್ಲಿ ಹದಗೊಂಡಾಗಲೆ ನುಡಿ ಮಂತ್ರವಾದೀತು, ನಡೆ ಪಾವನ ವಾದೀತು !

ಸಂಪಿನ ಕಾಲದಲ್ಲಿ ಮಾಸ್ತರು ದಿನವೂ ಮಧ್ಯಾಹ್ನದಲ್ಲಿ ಶಿಗ್ಗಾವಿಗೆ ಹೋಗಿ ಪೋಸ್ಟಮನ್ ರಾಮಣ್ಣನನ್ನು ಕಂಡು ಮಾತನಾಡಿ ಬರುತ್ತಿದ್ದರು. ಹುಂಜಪ್ಪನ ಗುಡ್ಡದ ಓವರಿಯಲ್ಲಿ ಪಡುವಣಾಭಿಮುಖವಾಗಿ ಕುಳಿತು ನೇಸರು ಭೂಮಿ ದೇವಿಯ ಮಡಿಲಲ್ಲಿ ಮಲಗುವವರೆಗೂ ಇಬ್ಬರೂ ಜೀವನದ ಉಜ್ವಲ ಭವಿತವ್ಯವನ್ನು ಕುರಿತು ನೂರು ಮಾತನಾಡುತ್ತಿದ್ದರು. ದೇಶದ ಕಾರ್ಮಿಕರೆಲ್ಲ ಒಂದಾಗಿ ಶೋಷಕ ವರ್ಗವನ್ನೆಲ್ಲ ನುಂಗಿ ನೀರು ಕುಡಿಯಬೇಕು ಒಬ್ಬ ಬಿರ್ಲಾ, ಟಾಟಾ ಇಡೀ ನಾಡಿನ ಔದ್ಯೋಗಿಕ ಶಕ್ತಿಯನ್ನೇ ಕೈಯಲ್ಲಿರಿಸಿಕೊಂಡು ಯುದ್ಧೋತ್ತರ ಪುನರ್ರಚನೆಯ ಕಾರ್ಯಕ್ರಮವನ್ನು ಸರ್ಕಾರದ ಮುಂದೆ ಇಡಲು ಯಾರು? ಅವರು ಯಾವ ಗಿಡದ ಟೊಂಗೆ? ಈ ದೇಶದ ರಾಜಕೀಯ ಜೀವನದ ಪ್ರಗತಿ, ಸಾಂಗ್ರಾಮಿಕ ಸಂಘಟನಾ ರೀತಿ, ವೈಜ್ಞಾನಿಕ, ಔದ್ಯೋಗಿಕ ಪ್ರಪಂಚದ ಮುನ್ನಡೆ ಇವುಗಳನ್ನು ನೆಲದ ಮಕ್ಕಳೆ ಯೋಚಿಸಬೇಕು ತಮಗೆಂತಹ ರಾಜ್ಯಾಂಗ ರಚನೆ ಬೇಕು ಅವರೇ ಹೇಳಲಿ. ಮೇಲು ವರ್ಗ ಕೀಳು ವರ್ಗ ನಿರ್ಮೂಲವಾಗಿ ಒಂದೇ ಜಾತಿ ನೆಲೆಗೊಳ್ಳಬೇಕು ಭರತ ಭೂಮಿಯಮೇಲೆ. ಒಬ್ಬಾತ ಭೋಗಿ, ಸಹಸ್ರಗಟ್ಟಲೆ ರೋಗಿಗಳು ಅದ್ಯಾಕೆ? ಸಾವಿರ ವರುಷದಿಂದ ಬಂದ ಕೊಳೆಯನ್ನೆಲ್ಲ ಬರೀ ಒಂದು ಸಮತಾವಾದದ ಕೊಡ್ಲಿಯಿಂದ ಕಡಿದುಹಾಕಿ ರಷ್ಯ ಇಡೀ ಜಗತ್ತಿನಲ್ಲಿ ತಲೆಯೆತ್ತಿ ಮೆರೆಯುವಂತಾಯಿತಲ್ಲಾ-ಹೂಂ-ನಾವೂ ಹಾಗೇಕಾಗಬಾರದು? ಭಾರತ ದೇಶ ಈ ಭಂಡವಾಳಶಾಹಿಗಳ ಕರಾಳ ಕರಗಸದ ದವಡೆಯಿಂದ ಮೊದಲು ಪಾರಾಗಿ ನಂತರ ತನ್ನದೆ ಆದ ರಾಜಕೀಯವಾದವನ್ನು ಕಟ್ಟಿಕೊಂಡು, ಬಡತನ ಸಿರಿವಂತಿಕೆಯೆಂಬ ಭೇತಾಳ ಭೂತಗಳನ್ನು ಕೊಂದುಹಾಕಿ, ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಕೊಟ್ಟು ಇಹವನ್ನೆ ನಂದನವನವನ್ನಾಗಿ ಏಕೆ ಮಾಡಬಾರದು? ಈ ದರಿದ್ರ ದೇಶದ ಕೂಲಿಗಳು ದೇವತೆಗಳಾಗಬೇಕು. ಅವರ ಗುಡಿಸಲುಗಳು, ಅವರ ಪಾಲಿನ ಕೊಳಚೆ ಭೂಮಿ ಅಮರಾವತಿಯಾಗಬೇಕು. ರೈತರು, ಕೂಲಿಕಾರರು, ಸಿಪಾಯಿಗಳು, ನೌಕರರು, ಶಿಕ್ಷಕರು, ಪೋಸ್ಟಮನ್ನರು—ಶೋಷಣೆಗೀಡಾದವರ

ಕುಲವೆಲ್ಲ ಮುಷ್ಕರು ಹೂಡಿ ರಕ್ತಪಾತವಾಗದಂತಹ ಕ್ರಾಂತಿಯನ್ನು ದೇಶ ದಾದ್ಯಂತ ನಡೆಸಿದರೆ ನಾಳೆಯೆ ಭಾರತ ಬಂಧ ಮುಕ್ತ, ನಾಳೆಯೆ ಬಡವರು ಸಿರಿವಂತರು, ನಾಳೆಯೆ ಲಕ್ಷಾಪತಿಗಳು ಭಿಕ್ಷಾಪತಿಗಳು........

'ಅಗೋ ಮಾಸ್ತರೇ, ರಾಮಣ್ಣಾ ಹೊತ್ತು ಮುಳುಗುತ್ತಿದೆ. ನೀವು ಹಿರೇಮಲ್ಲೂರಿಗೆ ಹೊರಡಿರಿ. ನೀವು ಶಿಗ್ಗಾವಿಗೆ ತೆರಳಿರಿ' ಎಂದು ಮುಂತಾಗಿ ಹುಂಜಪ್ಪನ ಗುಡ್ಡದ ಮೇಲಿನ ಆಲದಮರದಲ್ಲಿ ಮನೆಮಾಡಿಕೊಂಡಿದ್ದ ಮರ ಕುಟಿಗ ಎಂದಿನಂತೆ ಸಂಜೆಯ ಮುಂದೆ 'ಕೊಟರ್' 'ಕೊಟರ್' 'ಕೊಟರ್' ಎಂದು ಮೂರುಬಾರಿ ಒದರಿದಾಗಲೆ ಅವರಿಬ್ಬರಿಗೆ ಈ ತೆರನಾದ ಎಚ್ಚರಿಕೆ ಕೇಳಿ ಬಂದಂತಾಗುತ್ತಿತ್ತು. ಆಗ ಮಾಸ್ತರು ಮತ್ತು ರಾಮಣ್ಣ ಭಾವನಾ ರಾಜ್ಯ ದಿಂದ-ಅಲ್ಲ ನೈಜವಾಗಿರುವ ಲೋಕದಿಂದ ಹೊರಗೆ ಬರುತ್ತಿದ್ದರು. ತಾಸು ರಾತ್ರಿಯಾದಮೇಲೆ ತಂತಮ್ಮ ಮನೆಯ ಹೊಸ್ತಿಲಲ್ಲಿ ನಿಂತುಕೊಂಡು ಮನೆಯ ಮಕ್ಕಳಿಂದ ಯಜಮಾನಿ ಕಾಯಿಸಿದ ನೀರನ್ನು ತರಿಸಿ ಕಾಲಿಗೆ ಹೊಯ್ದು ಕೊಂಡು ದೈನಂದಿನ ವ್ಯವಹಾರಕ್ಕೆ ತೊಡಗುವರು !

ಸಂಪು ಹೂಡಿದ ದಿನಗಳಲ್ಲಿ ಮಾಸ್ತರು ಉತ್ಸಾಹದ ತಹ ತಹದಿಂದ ಕುಣಿದರು ಅವರು ತಳೆದ ಉತ್ಸಾಹ ನಮಗೆಲ್ಲ ತುಂಬ ಸುಖ ಕೊಟ್ಟಿತು. ಅವರಿಗೆ ಮತ್ತೆ ಮಲ್ಲೂರಿಗೇನೆ ವರ್ಗವಾಗುತ್ತದೆಯೆಂದು ಭಾವಿಸಿ ತಾಯಿ ಈ ಮೊದಲು ಪಟ್ಟ ಕಷ್ಟ ಮರೆತು ಸುಖಿಸಿದರು. ಗಾಂಧೀಜಿಗೆ ನೂರೈವತ್ತು ವರುಷವನ್ನು ಅಂದು ನನ್ನ ತಾಯಿ ಮನೆಯ ಗದ್ದುಗೆಯ ಬಳಿ ಹೋಗಿ ದೇವ ರನ್ನು ಪ್ರಾರ್ಥಿಸಿಯೆ ಪ್ರಾರ್ಥಿಸಿದರು !

ಒಂದು ದಿನ ಮುಂಜಾವಿನಲ್ಲಿ ಪೋಸ್ಟಮನ್ ರಾಮಣ್ಣ ಶಿಗ್ಗಾವಿ ಯಿಂದ ಹನ್ನೆರಡು ವರುಷದ ತನ್ನ ಮಗುವಿನ ಕೈಯಲ್ಲಿ ಚೀಟಿಯೊಂದನ್ನು ಬರೆದು ಕಳುಹಿಸಿಕೊಟ್ಟ.

'ನಮುಸ್ಕಾರ ಮಾಸ್ತರರೇ, ಇಂದಿನ ಸಂಯುಕ್ತ ಕರ್ನಾಟಕದಲ್ಲಿ ನಿಮ್ಮ ಶಿಕ್ಷಕರ ಸಂಪು ನಿಂತು ಒಪ್ಪಂದಕ್ಕಿಳಿದ ಬಗ್ಗೆ ಪ್ರಕಟನೆ ಬಂದಿದೆ. ರಾಷ್ಟ್ರೀಯ ಪತ್ರಿಕೆ ಸಾರುವ ಸುದ್ದಿ ಇದು. ನಮ್ಮ ದೇಶದ ದೌರ್ಭಾಗ್ಯ. ನೀವೇನು ಮಾಡೀರಿ? ಇಲ್ಲ, ಇಲ್ಲ ನೀವು ನಾವೇ ಮಾಡಬೇಕಿತ್ತು.

ಹೋರಾಡಬೇಕು. ಇಲ್ಲಾ ಮಡಿಯಬೇಕು. ಎಲ್ಲಿ ಹೋಯಿತು ಆ ಮಹಾ ಮಂತ್ರ ? ಈ ಬಕಧ್ಯಾನ ನನಗೆ ಸಮ್ಮತವಾಗದು. ಬಂಗಾರದ ಬಳಿಯ ಆಸೆಗೆ ಬಾಯಿ ತೆರೆದ ಬ್ರಾಹ್ಮಣನ ಗತಿ ನಿಮಗೆ ಗೊತ್ತೇ ಇದೆ. ಶಾಲೆಯ ಮಕ್ಕಳಿಗೆ ಆ ಪಾಠ ಕಲಿಸಿದ್ದರೂ ಕಲಿಸಿರಬಹುದಲ್ಲ! ಬಂಡವಾಳಶಾಹಿ ಸಿಂಹ—ಆ ಆಂಗ್ಲ ದೇಶದ ರಾಜಕೀಯ ಮರಿಗಳು ಮುಂದಿಟ್ಟ 'ಇಂಟೀರಿ-ಯಮ್'ದ ಆಸೆಗಾಗಿ ಈ ನಾಡಿನ ಆಸೆಗೆಟ್ಟ ರಾಜಕೀಯ ಧುರೀಣರು ಶಿಕ್ಷಕರ ಸಂಪಿಗೆ ತಣ್ಣೀರು ಹೊಯ್ದರು. ಧಗಧಗಿಸುತ್ತಿರುವ ತಪಸ್ಸಿನ ಯಜ್ಞದಲ್ಲಿ ಮಣ್ಣು ತೂರಿದರು. ಇನ್ನಾವ ಹೋರಾಟವನ್ನು ಅವರು ಸದೆಬಡೆವಿದ್ದರೂ ನನಗೆ ಸಂತೋಷವಿತ್ತು. ಆದರೆ ಮಾಸ್ತರರೇ, ಗೋವಿನಂತಹ ಮಾಸ್ತರರ ಹೃದಯದಲ್ಲಿ ಚೂರಿ ಇಟ್ಟು ಬಸಿವ ನೆತ್ತರಿಂದ ಓಕಳಿಯಾಡಿವರಲ್ಲ? ಇವರು ಇನ್ನೇನು ಮಾಡಲು ಹಿಂಜರಿದಾರು? ಕಲ್ಲು ಮೂರುತಿ ಕಡೆದು ನಾಡಿನ ದೇಗುಲದಲ್ಲಿ ಸರ್ವಾಂಗ ಸುಂದರವಾದ ವಿಗ್ರಹವನ್ನು ಸ್ಥಾಪಿಸುವ ಶಿಲ್ಪಿಗಳ ಕೈಯನ್ನೆ ಕತ್ತರಿಸಿದ ಈ ರಾಜಕೀಯ ಕುಲಹೀನರು ಇನ್ನೇತಕ್ಕೆ ಮನಸ್ಸು ಮಾಡದೆ ಇದ್ದಾರು? ರಷಿಯಾ ದೇಶವನ್ನು ಯಾರು ನಿರ್ಮಿಸಿದರು ಗೊತ್ತೇ? ಚೀನ ದೇಶವನ್ನು ಕೆಸರಿನಿಂದ ಮೇಲಕ್ಕೆತ್ತಿದವರು ಯಾರು ಗೊತ್ತೆ ? ಅಂದು ಹುಂಜಪ್ಪನ ಗುಡ್ಡದ ಮೇಲೆ ಕುಳಿತು ನಾವು ಕಟ್ಟಿದ ಕನಸು, ನಾವು ಹೂಡಿದ ಯೋಚನೆ,ನಾವು ಮಾಡಿದ ನಿರ್ಧಾರ ಮಾಸ್ತರರೇ, ಇವೊತ್ತು ....!

'ಥೂ, ಒಪ್ಪಂದ ನಮ್ಮ ಕಸಬಲ್ಲ. ಖಂಡಿತವಾಗಿ ಭಾರತೀಯರ ದಂತೂ ಅಲ್ಲೇ ಅಲ್ಲ. ಕಿತ್ತೂರು ಚನ್ನಮ್ಮರಾಣಿ ಹೆಂಗುಸಾದರೇನು, ಹೋರಾಡಿಯೇ ಮಡಿದಳಲ್ಲ! ಬೆಳವಡಿಯ ರಾಣಿ, ಝಾಂಸಿಯ ರಾಣಿ, ಗುಜರಾತಿನ ಕಸ್ತೂರ ಬಾ, ಮದರಾಸಿನ ಕ್ಯಾಪ್ಟನ್ ಲಕ್ಷ್ಮಿ—ಮಾಸ್ತರರೇ, ಬರೀ ಹೆಂಗಸರ ಹೆಸರನ್ನು ಇನ್ನೆಷ್ಟು ಕೊಡಲಿ? ವೀಣಾದಾಸ ಬಂಗಾಲದ ಗವ್ಹರ್ನರನನ್ನು ಗುಂಡಿಕ್ಕಿ ಕೊಲ್ಲಲು ಹೋದ ಕತೆಯನ್ನು ಇನ್ನೊಮ್ಮೆ ನೆನಪಿಗೆ ತಂದುಕೊಳ್ಳಿರಿ. ಬಡವನ ಹಸಿವೆಯ ಗರ್ಜನೆಯ ಮುಂದೆ ದೇವರೂ ಕೂಡ ಪೇರೀ ಕಿತ್ತಾರೆಂದು ಕನ್ನಡದ ಕವಿ ಹಾಡಿದ್ದನ್ನು ನೆನಪಿಗೆ ತಂದುಕೊಳ್ಳಿರಿ. ನಮ್ಮ ತಾಯ ಕುಲವೆ ಅಷ್ಟೊಂದು ಸ್ವಾತಂತ್ರ್ಯ ಮನೋವೃತ್ತಿಯದೆಂದ ಮೇಲೆ

ಆ ಕುಲದ ಬಳ್ಳಿ ನಾವು ಹೇಗಿರಬೇಕು, ಹೇಗಿರಬೇಡ! ನಿಮ್ಮ ಕರ್ಮ, ನಿಮ್ಮ ದುರ್ದೆಶೆ ಸಂಪು ಒಪ್ಪಂದಕ್ಕೆಳಿಯಿತು.

ಇನ್ನೇನು ? ನೀವು ಎಂದಿನಂತೆ ನಾಳೆ ಶಾಲೆಗೆ ಹೋಗಿ ಹಾಜರಾಗಿರಿ. ಮಕ್ಕಳ ಅಗಲುವಿಕೆಯಿಂದಾದ ದುಃಖ ಮರೆತು ಸುತ್ತಣ ಜಗತ್ತನ್ನು ನೋಡಿ ಹಿಗ್ಗಿ ಸುಖಿಸಿರಿ. ನಾವು ಇಲ್ಲಿ ನೆಲೆಯೂರಿ ನಿಲ್ಲಲು ಬಂದವರಲ್ಲ. ಇಂದೋ ನಾಳೆಯೋ ದಾಸನೂ ಈಶನೂ ಹೋಗಬೇಕು. ಎಂಥ ಸಾರ್ವಭೌಮನೂ ಕಿರೀಟವನ್ನು ಬದಿಗಿರಿಸಿ ಮೂರು ಗೇಣು........ಬರೀ ಮೂರು ಗೇಣಿನ ಮಣ್ಣಿನಲ್ಲಿ ಮಲಗಬೇಕು. ನೀವು ಕಳಸಕ್ಕೆ ಹೋಗಿ ಹಾಜರಾದ ಮೇಲೆ ನಿಮ್ಮ ಕ್ಷೇಮ ಬರೆದು ತಿಳಿಸಿರಿ. ನನಗೆ ನಿಮ್ಮ ಸುಖವೇ ಸುಖ. ಆನಂದವೆ ಆನಂದ.

' ಇನ್ನೊಂದು ಮಾತು. ಕಳೆದ ಮೂರು ದಿನಗಳಿಂದ ಮೈಯಲ್ಲಿ ಏರಿದ ಜ್ವರ ಇಳಿದಿಲ್ಲ. ಆವರೂ ಈ ಹೊತ್ತು ತುಸು ಗುಣಮುಖ. ವೈದ್ಯರು ಜ್ವರದ ಲಕ್ಷಣ ಒಂದಿಷ್ಟು ಮುಖ ಕಿವಿಚೇ ಹೇಳಿದರು. ದೇಹದಲ್ಲಿ ಶಕ್ತಿ ಸಾಲದು. ಸಾಲದೆಂದು ಕುಳಿತರೆ ಮನೆಯ ಕೆಲಸ ನಡೆಯಬೇಕಲ್ಲ. ಕುಳ್ಳುಕಟ್ಟಿಗೆ ತರಲು ಹೋಗಬೇಕು. ಹೋಗಲಿ ಬಿಡಿರಿ. ಅದೇನೂ ದೊಡ್ಡದಲ್ಲ. ಪೂರ್ತಿಯಾಗಿ ಗುಣವಾದ ಮೇಲೆ ಮತ್ತೆ ನಿಮಗೆ ಬರೆದು ತಿಳಿಸುತ್ತೇನೆ.

' ನನ್ನೊಂದಿಗೆ ನೀವೂ ಪ್ರಾರ್ಥನೆ ಮಾಡಿರಿ. ಲೋಕದಲ್ಲಿ ನಮ್ಮಂತಹ ಶ್ರಮಜೀವಿಗಳಿಗೆ ಜಯಿಸಿಗಲಿ ಎನ್ನಿರಿ. ನಿಮ್ಮವ—ರಾಮಣ್ಣ ! '

ರಾಮಣ್ಣನ ಮಗ ತಂದ ಕಾಗದವನ್ನು ಮಾಸ್ತರರು ಓದಿ ತುಂಬಿ ತುಳುಕಾಡಿದರು. ತಾಯಿ ರಾಮಣ್ಣನ ಮಗನಿಗೆ ಊಟಮಾಡಿಸಿ ಅವನ ತಂದೆಯ ಕ್ಷೇಮ ಕೋರಿ ಶಿಗ್ಗಾವಿಗೆ ಕಳುಹಿಸಿಕೊಟ್ಟರು. ಮರುದಿನ ಮಾಸ್ತರರು ಕಳಸಕ್ಕೆ ಹೋಗಲು ಸಿದ್ಧರಾದರು. ಅವರು ಊರಿಗೆ ಹೋಗುವ ಮುನ್ನಾದಿನ ಮಾದಿ ಹಳ್ಳ ತುಂಬಿಬಂದು ದಾರಿಯನ್ನು ಅಡ್ಡಗಟ್ಟಿದಳು. ಎಂದಿನಂತೆ ತಾಯಿ ಮಾದಿಯೊಂದಿಗೆ ಉಸಿರುಗರೆಯುದಿರಲಿಲ್ಲ !

*     *     *     *

ವಾರಗಳು ಉರುಳಿದವು. ತಿಂಗಳುಗಳು ದಾಟಿದವು. ಹೊತ್ತು ಯಾರಿಗೆ ನಿಂತೀತು ?

ಒಪ್ಪಂದಕ್ಕಿಳಿದ ಶಿಕ್ಷಕರ ಸಂಪಿನ ಪರಿಣಾಮ ಏನೂ ತೋರಲೆ ಇಲ್ಲ. ಈ ವಿಷಯ ಕುರಿತು ಮಾಸ್ತರರು, ರಾಮಣ್ಣ ಪತ್ರದ ಮೂಲಕ ಚರ್ಚೆಯೆ ಚರ್ಚಿಸಿದರು. ಮಾಸ್ತರರು ಒಮ್ಮೊಮ್ಮೆ ಪೋಸ್ಟಮನ್ ರಾಮಣ್ಣನ ಸೂಚನೆಗೆ ಒಪ್ಪುತ್ತಿದ್ದರಂತೆ.

೪೬, ಜುಲೈ ೧೧ ! ದೇಶದಾದ್ಯಂತ ಪೋಸ್ಟಮನ್‌ರ ಸಂಪು ! ನಮ್ಮ ಸಂಗ್ರಾಮದ ಇತಿಹಾಸದಲ್ಲಿ ನೆತ್ತರಿನಿಂದ ಬರೆದಿಡುವಂತಹ ಸಂಗತಿ !

ಮಾಸ್ತರರಿಗೆ ಈ ವಿಷಯ ಸಕಾಲಕ್ಕೆ ತಿಳಿದಿದ್ದರೂ ರಾಮಣ್ಣ ಪ್ರತ್ಯೇಕ ಒಂದು ಆಳು ಕಳುಹಿಸಿ ಸಂಪಿನ ಸುದ್ದಿ ತಿಳುಹಿಸಿದ ಅವನ ಆನಂದಕ್ಕೆ, ಹುಮ್ಮಸ್ಸಿಗೆ ತೀರವೆ ಇರಲಿಲ್ಲ ! ಮಾಸ್ತರರು ಸಂಪು ಹೂಡಿದವರಿಗಾಗಿ ಸಹಾನುಭೂತಿ ತೋರಿಸಲೆಂದು ಒಂದು ದಿನ ಶಾಲೆಯನ್ನು ಬಿಟ್ಟು ಹಿರೇ ಮಲ್ಲೂರಿಗೆ ಬಂದು ಅಲ್ಲಿಂದ ಶಿಗ್ಗಾವಿಗೆ ರಾಮಣ್ಣನನ್ನು ಭೆಟ್ಟಿಯಾಗಲು ಹೋದರು.

ರಾಮಣ್ಣನ ಮನೆಯ ತಲೆವಾಗಿಲಲ್ಲಿ ಕಾಲಿಟ್ಟಾಗ ಅವನ ಹೆಂಡತಿ ಮಾಸ್ತರರನ್ನು ಕಂಡು ಒಮ್ಮೆಲೆ ಬಿಕ್ಕಿ ಬಿಕ್ಕಿ ಅಳತೊಡಗಿದಳಂತೆ !

ಮಾಸ್ತರರು ರಾಮಣ್ಣನ ಹಾಸುಗೆಯ ಬಳಿ ಕುಳಿತುಕೊಂಡರು. ಮುಖದ ತುಂಬ ಕೂದಲು, ಕುಳಿ ಸೇರಿದ ಕಣ್ಣು, ಕೆನ್ನೆಯ ಮೇಲೆ ನಿಚ್ಚಳವಾಗಿ ಒಡೆದು ತೋರುವ ಎಲುವಿನ ಗೂಡು, ವಿಶಾಲವಾದ ಎದೆ ಬರಡಾಗಿ ಹೋದು ದರ ಮೂಲಕ ಸ್ಪಷ್ಟವಾಗಿ ಕಾಣುವ ಎಲುವಿನ ಹಂದರ--ಇದನ್ನೆಲ್ಲ ಕಂಡು ಮಾಸ್ತರು ನಡುಗಿಹೋದರು. ‘ ರಾಮಣ್ಣಾ ’ ಎಂದಾಗ ಆತ ಬರಿ ಕಣ್ಣೀರು ಹಾಕಿದನಂತೆ. ‘ ಈ ಪೋಸ್ಟಮನ್ನರ ಸಂಪು, ಶ್ರಮಜೀವಿಗಳ ಸಂಪು ಯಶಸ್ವಿಯಾಗಬೇಕು. ಶೋಷಕ ವರ್ಗ ಕೈಜೋಡಿಸಿಕೊಂಡು ಕಾರ್ಮಿಕರಿಗೆ ಕೊಟ್ಟ ಕಷ್ಟವನ್ನು ಒಪ್ಪಿಕೊಳ್ಳಬೇಕು. ನಮಗೆ ಹಣ ಬೇಡ. ಆದರೆ ನ್ಯಾಯ ಮಾತ್ರ ಬೇಕು. ನಮಗೆ ಪಕ್ಷಪಂಗಡ ಬೇಡ. ಆದರೆ ಖಂಡಿತವಾಗಿ ನಯ, ನೀತಿ ಬೇಕು........ಈ ಸಂಪು ಜಯಭೇರಿ ಹೊಡೆಯಬೇಕು. ಇಲ್ಲದೆ ಹೋದರೆ ಕಾರ್ಮಿಕರೆಲ್ಲ ಹಸಿವೆಯ ಮಾರಿಗೆ ಆಹುತಿಯಾಗಲಿ. ಅದನ್ನು ಸಹಿಸುವದಾಗಿದ್ದರೆ ಕಲ್ಲು ಕಟ್ಟಿಕೊಂಡು ಹೊಳೆ-ಹಳ್ಳ, ಕೆರೆ-ಬಾವಿಗಳ ಪಾಲಾಗಲಿ. ಇಲ್ಲಾ ಅವರು ಸೋಲಬೇಕು—ಇಲ್ಲಾ ನಾವು ಸಾಯ

ಬೇಕು........! ಇಂತಹದೇ ಒಂದು ಆಶಯವನ್ನು ರಾಮಣ್ಣನ ಮನಸ್ಸು ವ್ಯಕ್ತಪಡಿಸಲೆಂದು ಚಟಪಡಿಸುತ್ತಿತ್ತು. ಆದರೆ ಅದಾಗದೆ ಹೋದುವರಿಂದ ಕಣ್ಣಿನ ಗೊಂಬೆಗಳನ್ನು ಒಂದೇ ಸವನೆ ಓಡಾಡಿಸುತ್ತ ಆತ ಆ ಅಭಿಪ್ರಾಯ ಸೂಚಿಸಿದನಂತೆ !

ಹಿಂದೊಮ್ಮೆ ಬಂದ ಜ್ವರ ರಾಮಣ್ಣನಿಗೆ ಈಗ ಮರುಕಳಿಸಿ ಬಂದಿದ್ದವು. ವೈದ್ಯರು ಆಗಲೆ ಜ್ವರದ ಲಕ್ಷಣ ಕೆಟ್ಟೆಂದು ಸೂಚಿಸಿದ್ದರಲ್ಲ! ರಾಮಣ್ಣ ಒಣಗಿದ ಮರವನ್ನು ಸೀಳಿ ಸಿಪ್ಪೆಯನ್ನು ಒಂದು ದಿನ ಹೊತ್ತುಕೊಂಡು ಬಂದವನೆ ಮಲಗಿದ. ಆಮಂತ್ರಣ ಕೊಟ್ಟು ಬಂದಂತಾಗಿತ್ತು ಬೇನೆಗೆ! ಬಂದೇ ಬಿಟ್ಟಿತು. ಹೆಡಮುರಿಗೆ ಕಟ್ಟಿತು. ಕೈಗೆ ಬಂದ ಇಪ್ಪತ್ತೈದು ರೂಪಾಯಿಗಳಲ್ಲಿ ಐದು ವಿಮಾ ಇಳಿಸುವದಕ್ಕೆ, ಐದು ಮಕ್ಕಳ ಔಷಧಿಗಾಗಿ, ಐದು ಬಾಡಿಗೆ ಬಟ್ಟೆಗಾಗಿ—ಇನ್ನುಳಿದ ಹತ್ತು ರೂಪಾಯಿಗಳಲ್ಲಿ ಮೂರು ಮಕ್ಕಳು, ತಾವಿಬ್ಬರು ಗಂಡ ಹೆಂಡಿರು ತಿಂಗಳುದ್ದಕ್ಕೂ ಜೀವಿಸಿಕೊಂಡಿರಬೇಕು. ಮೊನ್ನೆ ಮೊನ್ನೆ ಬಂದು ಹೋದ ಬೇನೆಯ ಬಿಲ್ಲು ನೀಗಿಕೊಳ್ಳುವುದಕ್ಕೆ ರಾಮಣ್ಣ ವರುಷದ ಉಳಿತಾಯವನ್ನೆ ತೆರಬೇಕಾಗಿತ್ತು! ಈಗ ಬಂದ ಸಂಕಟ ಉಳಿಸುವದಕ್ಕೆ ಯಾರು ಬರಬೇಕು........? ರಾಮಣ್ಣನ ತಲೆಯ ಮೇಲಿನ ಗೂಡಿನಲ್ಲಿದ್ದ ದಿನವಹಿ ಒಂದೇ ಸಮನೆ ಕಣ್ಣೀರು ಹಾಕುತ್ತಿತ್ತು.

ರಾಮಣ್ಣ ಹೊಟ್ಟೆಯೊಳಗಿನ ಜಳ ತಾಳಲಾರದೆ ಕಸಿವಿಸಿ ಒದ್ದಾಡಿದ. ಮಾಸ್ತರು ತಲೆಗಿಂಬಿನಲ್ಲಿ ಕುಳಿತೆ ಕಣ್ಣು ಒರಸಿಕೊಂಡರು. ಇಬ್ಬರಿಗೂ ಕಷ್ಟದಿಂದ ಪಾರಾಗುವ ದಾರಿ ತೋರಲೇ ಇಲ್ಲ! ದುಃಖಿಗಳು, ದರಿದ್ರರು ಕಷ್ಟಕಾಲದಲ್ಲಿ ಪಡುವ ಅನುಭವವೇ ಅಂತಹದು!

ಸಂಜೆಯುವರೆಗೂ ರಾಮಣ್ಣನಿಗೆ ಔಷಧೋಪಚಾರ ಮಾಡಿ ಇಳಿಹೊತ್ತಿನಲ್ಲಿ ಮಾಸ್ತರು ಮನೆಗೆ ಬಂದರು. ಬರುವಾಗ ದಾರಿಯಲ್ಲಿ ಅವರಿಗೆ ಸರ್ಪ ಅಡ್ಡಗಟ್ಟಿತಂತೆ!

ರಾತ್ರಿ ಮನೆಗೆ ಬಂದು ರಾಮಣ್ಣನ ಸ್ಥಿತಿಯನ್ನು ಕುರಿತು ಮಾಸ್ತರು ಇಳಿದನಿಯಲ್ಲಿ ಹೇಳಿದರು. ಅವರು ಹೇಳುವಂದು ಗೋಡೆಯ ಮೇಲಿನ ಹಲ್ಲಿ ಲೊಚ್ ಲೊಚ್ ಲೊಚ್ಚ ಎಂದು ಮೂರು ಬಾರಿ ನುಡಿಯಿತು. ತಾಯಿ ' ಶಿವ-ಶಿವ ' ಎಂದರು.

ಮುಂಜಾವಿನಲ್ಲಿ ಹೊಸ್ತಿಲಕ್ಕೆ ನೀರು ಹಾಕಿ ಕುಂಕುಮ ಹಚ್ಚಲೆಂದು ತಾಯಿ ಬಾಗಿಲತೆರೆದು ಹೊರಗೆ ಬರುವಷ್ಟರಲ್ಲಿ ಶಿಗ್ಗಾವಿಯಿಂದ ಆಳುಮಗನೊಬ್ಬ ರಾಮಣ್ಣ ಮಧ್ಯರಾತ್ರಿಯಲ್ಲಿ ತೀರಿಹೋದ ಸುದ್ದಿಯನ್ನು ತಂದನು. ಮಾಸ್ತರು ಶಿಗ್ಗಾವಿಗೆ ಓಡಿ ಓಡಿ ಹೋದರು! ಸರ್ಪ ಅಡ್ಡಗಟ್ಟಿ ಬಂದ ಕಾರಣ ಇದುವೆ ಏನು ?

ರಾಮಣ್ಣನಿಗೆ ಅಂಚೆ ಖಾತೆ ನೋಟೀಸು ಕೊಟ್ಟಿತು. ಆತ ಹಾಜರು ಆಗಲೆ ಇಲ್ಲ. ಸರಕಾರಕ್ಕೆ ಸಿಟ್ಟು ಬಂದಿತು. ರಾಮಣ್ಣನನ್ನು ಕೆಲಸದಿಂದ ತೆಗೆಯುವುದಾಗಿ ಕೊನೆಯದೊಂದು ಎಚ್ಚರಿಕೆ ಕಳಿಸಿತು !

ನಿಜ ಸಂಗತಿ ದಯಾಳು ಸರಕಾರದ ಅರಿವೆಗೆ ಬಂದಿತು. ಏಳು ದಿನಗಳ ಮೇಲೆ ಪೋಸ್ಟ ಮಾಸ್ತರರು ರಾಮಣ್ಣನ ಹೆಂಡತಿಯ ಹೆಸರಿನಲ್ಲಿ ಬಂದ ವಿಮೆಯ ಹಣವನ್ನು ಸಲ್ಲಿಸುವದಕ್ಕೆಂದು ತಾವೇ ಸ್ವತಃ 'ಚಕ್ಕು' ತೆಗೆದುಕೊಂಡು ಬಂದರು.

ರಾಮಣ್ಣನ ಮನೆಯ ಬಾಗಿಲು ಮುಚ್ಚಿತ್ತು. ಬೀಗ ಇರಲಿಲ್ಲ. ಕದ ತಟ್ಟಿ ನೋಡಿದರು. ಕೂಗಿದರು. ಚಿಲಕ ಬಡಿದರು. ಆದರೂ ಒಳಗಿನಿಂದ ಉತ್ತರವೇ ಬರಲಿಲ್ಲ. ಕಿಟಕಿಯ ಮರಡನ್ನು ತಪ್ಪಿಸಿ ಒಳಗೆ ಮೊಗವಿಟ್ಟು ನೋಡಿದಾಗ ದೃಶ್ಯವೊಂದನ್ನು ಕಂಡರು !

ರಾತ್ರಿ ಮೂರು ಮಕ್ಕಳು ಹಸಿವೆಯಿಂದ ಚಟಪಡಿಸುತ್ತಿದ್ದಾಗ ರಾಮಣ್ಣನ ಹೆಂಡತಿ ಅವುಗಳಿಗೆ ತಿನ್ನಲು ಅಫು ಕೊಟ್ಟು ಹಾಯಾಗಿ ಹೊಚ್ಚಿ ಮಲಗಿಸಿ ತಾನೂ ಕೊರಲ ಹಾರ ಹಾಕಿಕೊಂಡು ಮಕ್ಕಳನ್ನು ಕಾವಲುಗೆಯ್ಯುತ್ತ ಮತ್ತಿನ್ನಾವ ಕೆಲಸವನ್ನೂ ಮಾಡದೆ ಸುಖವಾಗಿ ನಿಂತುಕೊಂಡು ಬಿಟ್ಟಿದ್ದಳು !

ಮುಂದೆ ಪೋಸ್ಟ ಖಾತೆಯವರು ರಾಮಣ್ಣನನ್ನು ಕೆಲಸದಿಂದ ನಿವೃತ್ತಿ ಮಾಡಿದರು. ರಾಮಣ್ಣನ ಹೆಂಡತಿಯ ಹೆಸರಿನಲ್ಲಿ ಬಂದ ವಿಮಾ ಹಣವನ್ನು ಸರ್ಕಾರವು ತನ್ನ ವಶಕ್ಕೆ ತೆಗದುಕೊಂಡಿತು. ದಲಿತರ ಉದ್ಧಾರಕ್ಕಾಗಿ ಅದು ಬೇಕೇ ಬೇಕಲ್ಲ !

---

# ನಿಂಗಪ್ಪ ಮಾಸ್ತರು !



ಕುನ್ನೂರಿನಿಂದ ಹಿರೇಮಲ್ಲೂರಿಗೆ--

ಸುಮಾರು ಮೂರುವರೆ ತಾಸು ರಾತ್ರಿಯಾಗಿರಬೇಕು. ದವನದ ಹುಣ್ಣಿಮೆಯ ಬೆಳುದಿಂಗಳು ನಮ್ಮೂರಿನ ಅಂಗಳದಲ್ಲಿ ತಂಗಿತ್ತು. ಮೊದಲ ಬಾರಿಗೆ ಅತ್ತೆಯ ಮನೆಗೆ ಹೋಗಿ ಬಂದ ಎಳೆವರೆಯದ ಹೆಂಗಳು ನಮ್ಮ ಗೌಡರ ಮನೆಯ ಮುಂದಿನ ಬಯಲಿನಲ್ಲಿ ಕೋಲು ಹುಯ್ಯುತ್ತಿದ್ದರು. ಹನುಮನ ಗುಡಿಯ ಮುಂಗಡೆಯಲ್ಲಿ ಹುಡುಗರು ಕುಂಬಾರ ಆವಿಗೆಯ ಬೂದಿಯನ್ನು ಜಪ್ಪಿಸಿ ತಂದು ಗೆರೆ ಹೊಡೆದು ತಿಳ್ಳಿಯಾಡುತ್ತಿದ್ದರು ಇನ್ನೂ ನಿದ್ರೆ ಹಚ್ಚದ ಕೂಸುಗಳು 'ಕಳ್ಳೀ ಮಳ್ಳೀ ಕಪ್ಪಟ ಮಳ್ಳೀ' 'ಚಿಬ್ಬಲ ಚಿಬ್ಬಲ ಮರತಂಗೆವ್ವ' ಆಡುತ್ತಿದ್ದರು. ಮಕ್ಕಳ ಕಂಗಳಿಂದ ನಿದ್ರೆಯನ್ನು ಕಸಿದುಕೊಂಡು ತೀವ್ರಗತಿಯಿಂದ ಬಾನಿನಲ್ಲಿ ಚಂದ್ರಮನು ನಾಗಿದ ಕಾಲದಲ್ಲಿ ಹಡೆದವರು 'ಏನು ಕಣ್ಣಿಗೆ ನಿದ್ದೆ ಬಾರದೇ' ಎಂದು ಒಟಗುಡುತ್ತಿದ್ದರು. ತಂದೆ ತಾಯಿಗಳ ಬಿರುನುಡಿಯನ್ನು ಲೆಕ್ಕಿಸದೆ ತಮ್ಮ ಆಟದಿಂದ ಲೋಕದ ಆನಂದಗಡಲನ್ನು ಇನ್ನೂ ಉಕ್ಕಿಸುವ ಹವಣಿಕೆಯಲ್ಲಿಯೇ ಹುಡುಗರು ಮಗ್ನರಾಗಿ ಹೋಗಿದ್ದಾರೆ. ಅಂತೂ ಹೇಳಬಾರದ ಸಂಭ್ರಮ !

ನನ್ನ ಮನಸ್ಸು ಹೊಡೆದ ಹಂಜಿಯಂತಾಗಿ ಹೋಗಿತ್ತು. ಎಲ್ಲಿ ಹೋಗಿ ನಿಲ್ಲಲಿ ? ಯಾವ ಆಟದಲ್ಲಿ ಬೆರೆಯಲಿ ? ಯಾರೊಂದಿಗೆ ಬೆರೆತು ಈ ಸುಖದ ಒಸಗೆಯನ್ನು ವಿವರಿಸಿ ಹೇಳಲಿ ? ನಾನು ಇನ್ನೂ ಮಗುವಾಗಿ ಏಕೆ ಇರಬಾರದಿತ್ತು ? ಈ ಹೆಣ್ಣುಗಳು ಹೊಯ್ಯುವ ಕೋಲು, ಕಿರುಗೆಜ್ಜೆಯಾಕಾಗ ಬಾರದಿತ್ತು ? ಹೆಣ್ಣು ಹೊಯ್ಯುವ ಕೋಲು, ಮಕ್ಕಳ ಎಳೆನಗೆ, ಚಂದ್ರನ ಕೋಮಲ ಕಿರಣ--ಹೋ ! ಜಗದಲ್ಲೊಮ್ಮೆ ಇಂತಾಗಿ ಜನುಮ ತಾಳಿ ಬಂದರೆ ಬಾಳಿನ ಆಸೆ ಅಲ್ಲಿಗೇ ತೀರಿತು ! ಮನಸ್ಸು ಹಾಕಬಾರದ ಎಣಿಕೆ ಹಾಕುತ್ತ ರಿಂಗಣ ಸುಣಿತ ನಡಸಿತ್ತು !

'ಕೋಲು ಕೋಲೆನ್ನ ಕೋಲ....' ಎಂಬ ಪಲ್ಲವಿ ಬಳೆಗಳ ಗಲಕಿನೊಂದಿಗೆ, ಹೆಜ್ಜೆ ಕುಣಿತದೊಂದಿಗೆ, ಕಂಠದ ಮಾಧುರ್ಯದೊಂದಿಗೆ ಮಿಲನವಾಗಿ ಹೋಗಿತ್ತು. ಮುದುಕಮ್ಮಗಳು ಕುಲಾಯಿ ಕಟ್ಟಿಕೊಂಡು ಮೈಯನ್ನೆಲ್ಲ ಕಿವಿಮಾಡಿ ಕುಳಿತುಕೊಂಡಿದ್ದ ಜಾವ! ಮುಪ್ಪು ಬಂದ ಕಾಲವನ್ನು ಆ ಕ್ಷಣ ಪೂರ್ತಿಯಾಗಿ ಮರೆತು ಪ್ರಾಯದ ಮಿಂಚನ್ನು ಮೊಗದಮೇಲೆ ಮೂಡಿಸಿಕೊಂಡು ಮಂದಹಾಸ ಬೀರುವ ಮುದುಕಿಯರನ್ನು ನೀವೊಮ್ಮೆ ಕಂಡಿದ್ದರೆ ಅವರು ಆ ಕಾಲಕ್ಕೆ ಅನುಭವಿಸುವ ಆನಂದದ ಹೊರೆಯನ್ನು ಸಹಜವಾಗಿ ಅರಿಯಬಹುದಿತ್ತು! ಅಂತ ಜಾವದಲ್ಲಿ ನಡುವೆ ಯಾರೋ ಬಂದು ಆತಂಕ ಮಾಡಿದರು. ಇದೇನು, ಹಾಲಿನಲ್ಲಿ ಉಪ್ಪು ಬೆರಸಿದರೇನಮ್ಮ, ತಾಯೀ?

ಯಾರೋ ಅಪರಿಚಿತರು ಹೆಣ್ಣುಮಕ್ಕಳ ಕಡೆಗೇ ಬಂದರು. ಬಂದವರನ್ನು ಹೆಣ್ಣುಮಕ್ಕಳೆಲ್ಲ ನೋಡಿದರು. ಅಪರಿಚಿತರು ಹತ್ತಿರದಲ್ಲಿಯೇ ಬಂದರು. ಏನೇನೋ ಸಣ್ಣ ದನಿಯಲ್ಲಿ ಕೇಳಿದರು. ಯಾರಿಗೂ ತಿಳಿಯಲಿಲ್ಲವೆಂದು ಕಾಣುತ್ತದೆ ಮತ್ತೊಮ್ಮೆ ಕೇಳಿದರು. ಕೋಲು ಹೊಯ್ಯುವವರು ಆಕ್ಷಣ ಮೌನ ತಳೆದು ಅಪರಿಚಿತರ ಪ್ರಶ್ನೆಯನ್ನು ಏಕಚಿತ್ತದಿಂದ ಆಲಿಸಿದರು.

'ಇಲ್ಲಿ ಮಾಸ್ತರರ ಮನೆಯೆಲ್ಲಿದೆ ತಾಯೀ?'

'ಮಾಸ್ತರು ಊರಲ್ಲಿ ಇದ್ದಂತೆ ಇಲ್ಲರಿ. ಅದೇ ಮನಿ. ನಿಲ್ಲಿರಿ, ಬರತೇನಿ' ಇಂತು ಸಾಲೆಯ ಹುಡುಗಿಯೊಂದು ಉತ್ತರವಿತ್ತಿತು. ಅವಳ ಹೃದಯದಿಂದ ಮಾತು ತನ್ನನ್ನೇ ತಾನು ಕಸಿದುಕೊಂಡು ಬಂದಂತಿತ್ತು. ಅಪರಿಚಿತರು ನಿಮಿಷವೊಂದರಲ್ಲಿ ಒಳಗೊಳಗೇ ಕುಸಿದು ಹೋದರು.

'ಇಲ್ಲ. ಅಪ್ಪ ನಾಳೆ ಹೋಗುತ್ತಾನೆ. ಬರ್ರಿ, ಅದಾನು' ಇನ್ನೊಂದು ಚಿಕ್ಕ ಹುಡುಗಿಯೊಂದು ಮುದುಕೆಯರ ಮಧ್ಯದಿಂದ ಎದ್ದು ಬಂದಿತು. ಲಂಗ ಉಟ್ಟ ದೊರೆಸಾನಿಯಂತಿದ್ದ ಬನಶಂಕರಿ ಮಾಸ್ತರರನ್ನು ತನ್ನ ಮನೆಯ ಕಡೆಗೆ ಕರೆದುಕೊಂಡು ನಡೆದಳು. ಕೋಲಾಟವಾಡುವವರು ಪುನಃ ತಮ್ಮ ಕಾರ್ಯವನ್ನು ಮುಂದುವರಿಸಿದರು.

'ನಿಮಗೆ ಅಪ್ಪ ಬೇಕೇನರಿ'

‘ ಮಾಸ್ತರು ಬೇಕು ಮಗೂ ’

‘ ಊರಲ್ಲಿ ಅದಾನ್ರಿ. ಇವತ್ತೆ ಕಳಸಕ್ಕೆ ಹೋಗಾವಿದ್ದ. ಹೋಗಿಲ್ಲ.’

‘ ಸಾಲಿ ಕಲಿಸಲಿಕ್ಕೇನಮ್ಮ ’

‘ ಹೌದ್ರಿ. ಇಲ್ಲಿ ಕಲೀಸೂದು ಬ್ಯಾಡ ಅಂದಾರಂತ್ರಿ ’

‘ ಅದೇಕಮ್ಮ ? ’

‘ ಗೌಡರ ನ್ಯಾಯದಾಗ ನಾ ಬರಾಕ ಒಲ್ಲೆ ಅಂದನಂತ್ರೀ. ಅದಕ ಅವರು ಮ್ಯಾಲಿನವರಿಗೆ ಮಾಸ್ತರು ಬ್ಯಾಡಾ ಅಂತ ತಿಳಿಸಿದರಂತ್ರೀ. ಅಪ್ಪ ಹೋಗತಾನರಿ. ’

‘ ಮನೆಯಲ್ಲಿ ನೀವು ಯಾರ್ಯಾರಮ್ಮ ’

‘ ಅವ್ವ, ಅಪ್ಪ, ಸಣ್ಣ ಅಣ್ಣ, ದೊಡ್ಡ ಣ್ಣ, ನಾನು. ’

‘ ನೀನು ಏನು ಸಾಲೆಗೆ ಹೋಗತೀಯಾ ’

‘ ಹೂನ್ರಿ. ಮೂರನೆ ಎತ್ತಾ ಮಾಡತೀನಿ. ’

‘ ನಿನಗೆ ನಾನೇ ಅಮ್ಮ ಇನ್ನು ಸಾಲಿ ಕಲಿಸಾವಾ ’

‘ ಹೌದರೆ. ಬರ್ರಿ ಮಾಸ್ತರ ’

ವಿದ್ಯಾರ್ಥಿನಿ, ಹೊಸ ಉಪಾಧ್ಯಾಯರ ನಡುವೆ ಮಾತು ಕತೆ ಓಣಿಯ ಉದ್ದಕ್ಕೂ ನಡೆದಿತ್ತು. ಆ ಮನೆ ದಾಟಿ, ಈ ಓಣಿ ಹಾಯ್ದು ಮಾಸ್ತರರ ಮನೆಯ ಸಮೀಪ ಬಂದರು. ‘ ಇದ್ನರಿ ನಮ್ಮ ಮನಿ ’ ಎಂದು ಹುಡುಗಿ ತೋರಿಸಿತು. ಉಪಾಧ್ಯಾಯರಾಗಲು ಬಂದವರು ನೋಡಿದರು. ‘ ಇಂತ ಚಳವಳಿಯ ಕಾಲ ಅಂದರೇನು, ಮಾಸ್ತರರ ಮನೆಯ ಮೇಲೆ ಧ್ವಜ ಹಾರುತ್ತಿದೆಯಲ್ಲ ! ಷಾಹಬ್ಬಾಸ್ ! ’ ಎಂದು ಒಂದು ಕ್ಷಣ ಸ್ವದೇಶಾಭಿಮಾನದ ಜಾಗ್ರತೆಯಿಂದ ಅವರು ತುಂಬಿ ತುಳುಕಾಡಿದರು. ‘ ಇದನ್ನು ನಮ್ಮ ಅಣ್ಣ ಹಚ್ಚ್ಯಾನರಿ. ಧಾರವಾಡದಲ್ಲಿ ಓದತಾನು ’ ಎಂದು ಹುಡುಗಿ ತುಂಬ ಕುಲದ ಅಭಿಮಾನದಿಂದ ಹಿಗ್ಗಿ ಹೇಳಿದಳು. ‘ ಹೂಂ, ಭೇಷ್ ಮಗೂ ’ ಎಂದು ಶಿಕ್ಷಕರು ನುಡಿಯುವಷ್ಟರಲ್ಲಿ ಹೊಸ್ತಿಲ ಒಳಗೇ ಬಂದರು.

‘ ಬರ್ರೀ ಮಾಸ್ತರೀ, ಒಳಗೆ ಬರ್ರಿ. ಅಪ್ಪಾ, ಹೊಸ ಮಾಸ್ತರು ’

' ಯಾರು....? '

' ಇನ್ನೊಬ್ಬ ಮಾಸ್ತರು ನಿನ್ನ ಕೇಳಕೊಂತ ಬಂದಾರು '

' ಬರ್ರೀ. ಒಳಗೆ ಬರ್ರೀ ' ಎಂದು ಅತಿಥಿಗಳನ್ನು ಬರಮಾಡಿಕೊಂಡರು ಬನಶಂಕರಿಯ ಅಪ್ಪ.

' ನೀವೇ ಏನು ನಿಂಗಪ್ಪ ಮಾಸ್ತರು ! ಇವತ್ತೇ ನೀವು ' ಚಾರ್ಜು ' ತೆಗೆದುಕೊಳ್ಳಬೇಕಾಗಿತ್ತಲ್ಲ ! ತಡ ಆಯಿತಷ್ಟೇ. ಏನಿಲ್ಲ ಗಡಿಬಿಡಿ. ಬರ್ರಿ ' ಎಂದು ಮಾತನಾಡಿ ಅತಿಥಿಗಳನ್ನು ಪಡಸಾಲೆಗೆ ಕರೆದೊಯ್ದರು.

ನಿಂಗಪ್ಪ ಮಾಸ್ತರರಿಗೆ ಉತ್ತರ ಹೇಳಲಿಕ್ಕೇ ಬಾಯಿ ಬರಲಿಲ್ಲ. ಸುಮ್ಮನೇ ಇದ್ದರು. ಮಾಸ್ತರರ ಇಷ್ಟದ ಮೇರೆಗೆ ಕೋಟನ್ನು ರುಮಾಲನ್ನು ತೆಗೆದಿರಿಸಿ ಕಾಲಿಗೆ ನೀರು ತೆಗೆದುಕೊಂಡರು.

ಬನಶಂಕರಿ ಹೊರಗೆ ಕಂದೀಲನ್ನು ಹಚ್ಚಿ ತಂದಳು. ಅವಳ ಅಪ್ಪ, ಅವಳ ಹೊಸ ಮಾಸ್ತರರು ಹೊರಗೆ ಕಟ್ಟೆಯಮೇಲೆ ಬಂದು ಕುಳಿತರು. ಇಬ್ಬರೂ ಶಿಕ್ಷಕರು ಒಬ್ಬರಿಗೊಬ್ಬರಿಗೆ ಅಪರಿಚಿತರು. ಆದರೂ ಅವರು ಹಿಡಿದ ಕಾಯಕ ಒಂದೇ ಸ್ನೇಹ ತಂತುವಿನಿಂದ ಬಂಧಿಸಿತ್ತು ಎನ್ನುವುದಕ್ಕೆ ಬಂದ ಮೊದಲಲ್ಲಿಯೇ ನಡೆಸಿದ ಸಂಭಾಷಣೆಯೇ ಕಾರಣ. ಬನಶಂಕರಿ ಕಣ್ಣು ಬಿಡುತ್ತ ನೋಡಿದಳು,

' ಎಲ್ಲಿಂದ ಬಂದಿರಿ ನಿಂಗಪ್ಪ ಮಾಸ್ತರೇ ? '

' ಕು....ನ್ನೂ....ರಿ....ನಿಂ....ದ....' ಎಂದು ಒಂದೊಂದೆ ಅಕ್ಷರು ನುಂಗುತ್ತ ಉತ್ತರವಿತ್ತರು.

' ಎಷ್ಟು ದಿವಸ ಕುನ್ನೂರಿನಲ್ಲಿದ್ದಿರಿ ? '

' ಆರು ತಿಂಗಳು ಇನ್ನೂ ತುಂಬಿಲ್ಲ. '

' ಕಡಿಮೆ ಅಂದರೆ ಎರಡು ವರುಷಗಳಾದರೂ ತುಂಬಬೇಕು. ಅಲ್ಲಿಯವರೆಗೆ ವರ್ಗವಾಗದೆಂಬ ಕಟ್ಟು ಇದೆಯಲ್ಲ ! '

' ಮಾಸ್ತರ, ಕಾಯಿದೆ ನಿಯಮ ಅವೆಲ್ಲ ಯಾರಿಗೆ ? ನಮ್ಮ ಹಿತಕ್ಕಲ್ಲ ಅವು; ನಮ್ಮನ್ನಾಳುವದಕ್ಕೆ. ಸಾರ್ವಭೌಮ ಸರ್ಕಾರ ತನ್ನ ಭದ್ರತೆಗಾಗಿ

ಬೇಕು ಬೇಕಾದಂತಹ ಕಾಯಿದೆಗಳನ್ನು ತನ್ನ ನೌಕರ ವರ್ಗಕ್ಕೆ ಕೊಟ್ಟಿದೆ. ಈ ನೌಕರ ವರ್ಗ ತನ್ನ ಸೌಖ್ಯಕ್ಕಾಗಿ ದಲಿತರ ಮೇಲೆ ಕಾಯಿದೆ ಕಾನೂನು ಬಜಾಯಿಸಿ ಲೋಲವಾಡುತ್ತಿದೆ........' ನಿಂಗಪ್ಪ ಮಾಸ್ತರರಿಗೆ ಹೌರಾಗಿ ಆವೇಶ ಬರುತ್ತಿತ್ತು. ಅಂತಹ ಆವೇಶದ ಅಗ್ನಿಯಲ್ಲಿ ಈಸು ದಿನಗಳಲ್ಲೆಲ್ಲ ಬೆಂದು ಹೋದ ಮಾಸ್ತರರು ಏಟೂ ಕಳೆಗುಂದಿರಲಿಲ್ಲ. ಅದೇ ಸೋಜಿಗ !

'ಯಾಕೆ ನಿಮಗೂ ಅನ್ಯಾಯವೇ ?'

'ಅನ್ಯಾಯವಲ್ಲರೀ. ಈ ಒಂದು ವರ್ಷದಲ್ಲಿ ಇದು ಎರಡನೆಯ ಬಾರಿ ವರ್ಗ. ಮಕ್ಕಳೊತ್ತಟ್ಟಿಗೆ, ಮನೆಯೊತ್ತಟ್ಟಿಗೆ. ಮೇಲೆ ಬರಗಾಲದ ಬವಣಿ. ಕಾಣಬಾರದ ಕಷ್ಟವನ್ನು ನಮ್ಮ ಮೇಲೆಯೇ ದೇವರು ಹಾಕಿ ಕಳಿಸಿದನೇ ?'

'ಅದ್ಯಾಕೆ ?'

ಒಂದೇ ಆತ್ಮ ಪ್ರಕೃತಿಯುಳ್ಳವರಿಬ್ಬರು ಇದಿರು ಬದಿರು ನಿಂತು ಪಡಿದನಿಗುಟ್ಟುತ್ತಿದ್ದರು. ಒಂದೇ ನಿಲುಗನ್ನಡಿಯಲ್ಲಿ ಕಂಡ ಎರಡು ಮುಖಗಳು !

'ವರ್ಗವಾಗಲಿಕ್ಕೆ ಏನೂ ಕಾರಣವಿಲ್ಲ. ಶಿಕ್ಷಣಕ್ರಮದಲ್ಲಿ ತಪ್ಪಿಲ್ಲ. ದುಡಿಮೆಯಲ್ಲಿ ಕೊರತೆಯಿಲ್ಲ. ಇಡೀ ಹನ್ನೆರಡು ತಾಸು ಮಕ್ಕಳ ಹೆಚ್ಚಳಕ್ಕಾಗಿ ಹೋರಾಡುವವರಿಗೆ ಇಂತ ಹೊತ್ತು ಬರಬಾರದು.....'

'ಇದೇನು....? ಹೊತ್ತು....!'

'ಏನಿಲ್ಲ. ಮೊದಲೇ ಹೇಳಿದೆನಲ್ಲ ! ನೌಕರಿ ವರ್ಗದವರ ಮನೆ ಈ ಜಗತ್ತು. ನಾವೆಲ್ಲ ಆದರ ಊಳಿಗದವರು. ಕಲಘಟಗಿ ತಾಲೂಕಿನ ಏ. ಡಿ. ಈ. ಆಯ್. ಸಾಹೇಬರು ನಿಮಗೆ ಗೊತ್ತೇ ? ಅವರು ಮುಸಲ್ಮಾನರು ನಿಮಗೆ ಗೊತ್ತೇ ?'

'ಹೂಂ. ಚೆನ್ನಾಗಿ ಗೊತ್ತು. ಶಿಗ್ಗಾವಿ ತಾಲೂಕಿನಲ್ಲಿ ಕೆಲಸ ಮಾಡಿ ಹೋಗಿದ್ದಾರೆ. ನಾವೆಲ್ಲ ಅವರ ಕೈಲಿ ಬಿಸಿಲುಹಣ್ಣು ತಿಂದಿದ್ದೇವೆ.'

'ಹಾ, ಅವರೇ. ನಮಗೆ ಯಾರೇನು ? ಮುಸಲ್ಮಾನರಾಗಲಿ. ಹಿಂದುಗಳಿರಲಿ. ಜಾತಿ ಮಹತ್ವವಲ್ಲ. ನಮ್ಮ ಕಾಯಕ ಮಹತ್ವ. ಶಿಕ್ಷಣ

ಪ್ರಗತಿಯಲ್ಲಿ, ಮಕ್ಕಳ ಸಾಂಸ್ಕೃತಿಕ ಹೆಚ್ಚಳದಲ್ಲಿ ಕುಂದು ಬಂದದ್ದನ್ನು ತೋರಿಸುವುದಕ್ಕೆ ಯಾರೇನು ? ಅವರು ಮುಸಲ್ಮಾನ ನಿಮಗೆ ಗೊತ್ತೇ ಎಂದು ನಾನು ಏಕೆ ಕೇಳಿದೆನಂದರೆ....'

'ಹೂಂ....'

'ಹೇಳದೆ ಕೇಳದೆ ಸಾಲೆಯ ತಪಾಸಣೆಗಾಗಿ ಬಂದರು ಒಂದು ಮುಂಜಾವಿನಲ್ಲಿ. ಆದರ ಹಿಂದಿನ ರಾತ್ರಿ ಉದ್ದಕ್ಕೂ ಮನೆಯವಳು ಹೆರಿಗೆಯ ಬೇನೆಯಿಂದ ಬಳಲುತ್ತಿದ್ದಳು. ಒಂದು ಊರಿನಿಂದ ಇನ್ನೊಂದು ಊರಿಗೆ ಅಟ್ಟಿಕೊಂಡು ಬಂದ ಗರ್ಭಿಣಿಯ ಹೆರಿಗೆಯ ಕಾಲ ಬಹು ಸೂಕ್ಷ್ಮವಾಗಿತ್ತು. ಕಾಡು ಹಳ್ಳಿಯಲ್ಲಿ ಏನು ದಾದಿಯರೆ ? ವೈದ್ಯರೇ ? ಕಂಡವರ ಕಾಲು ಹಿಡಿದು ಉಪಚರಿಸುವ ಕಾಲದಲ್ಲಿ ತುಸು ತಡವಾಗಿರಬೇಕು. ಆದರೂ ಮನೆಯ ಕೆಲಸ ಬಿಟ್ಟು, ಬಾಣಂತಿಯನ್ನು ಅವಳ ಪಾಡಿಗೇ ಬಿಟ್ಟು ಸಾಲೆಗೆ ಓಡಿ ಓಡಿ ಹೋದೆ. ಸಾಹೇಬರು ಕೆಂಗಣ್ಣಿನಿಂದ ನನ್ನನ್ನು ನೋಡಿದರು. ವಿನಯದಿಂದ ನಮಸ್ಕಾರ ಮಾಡಿದೆ. ನಮಸ್ಕಾರಕ್ಕೆ ಪ್ರತಿಯಾಗಿ ನಮಸ್ಕಾರ ಮಾಡುವುದೊತ್ತಟ್ಟಿಗಿರಲಿ....'

'ಇಲ್ಲ. ದೊಡ್ಡವರು, ಸಾಹೇಬರು, ಶ್ರೀಮಂತರು ಬಡವರ ನಮಸ್ಕಾರಕ್ಕೆ ಪ್ರತಿಯಾಗಿ ನಮಸ್ಕಾರ ಮಾಡುವುದಿಲ್ಲ. ಅದು ಅವರ ದೊಡ್ಡಸ್ತಿಕೆಗೆ ಕುಂದು. ಇಲ್ಲಾ ಗೋಣು ಹಾಕುತ್ತಾರೆ. ಇಲ್ಲಾ ಕಣ್ಣಿನ ರೆಪ್ಪೆ ಕುಣಿಸುತ್ತಾರೆ. 'ನಮಸ್ಕಾರ ಸ್ವೀಕರಿಸಿದ್ದಾಗಿದೆ' ಎಂದು ಹೇಳುವ ಹೆಮ್ಮೆ ಅದು. ಬಡವರ ಶಿಷ್ಟಾಚಾರಗಳೇ ಬೇರೆ; ಶ್ರೀಮಂತರ ನಡೆವಳಿಕೆಯೇ ಬೇರೆ.'

'ನಮಸ್ಕಾರ ಯಾರಿಗೆ ಬೇಕಿತ್ತರೀ ? 'ಏನು ಮಾಸ್ತರ....? ನಿನ್ನ ತಲೆ ತಿರುಗಿದ ಹಾಗೆ ಕಾಣಿಸ್ತದ ! ಹುಡುಗರ ಸಾಲಿ ಏನು ? ಸಾಲಿಯಲ್ಲಿ ಬರೇ ಗಾಂಧಿ ಮಾತು ಹೇಳುತ್ತೀಯಂತಲ್ಲ ? ಈ ಗಾಂಧಿ ಫೋಟೋ ಏನು ? ಈ ನೆಹರು ಏನು ?....'

'ಹೂಂ. ಜಿನ್ನಾ ರಾಜಕಾರಣಿಗಳು....'

'ನನಗೆ ಗೊತ್ತಿಲ್ಲ. ಒಂದು ನೆವದ ಮೇಲೆ ಇನ್ನೊಂದು ನೆವ. ಗಾಯದ ಮೇಲೆ ಬರೆ ಕೊಟ್ಟು, ವೈದ್ಯಕೀಯ ಬಿಲ್ಲು ಹೆಚ್ಚು ಮಾಡುವವರದೇ

ಒಂದು ಕಸಬು. ಹೊಟ್ಟೆಗಿಲ್ಲದೆ ದುಡಿದು ಯಾರದೋ ಸುಖಕ್ಕಾಗಿ ದೇಹ ವನ್ನು ಇಂಚು ಇಂಚಿನಂತೆ ಹತಿ ಮಾಡುವದು ಇನ್ನೊಂದು ಕಸಬು....'

' ಅದೇನು ಮುಂದೆ........? '

' ಸಾಲೆಯು ತಪಾಸಣೆಯೊಂದು ನೆವ. ಸಾಲೆಯು ಮಾಸ್ತರರೆಲ್ಲ ಗುಲಾಮಗಿರಿ ಹಿಂದೂ ದೇಶದಲ್ಲಿಯ ಕತ್ತೆಗಳು. ಈ ನೌಕರ ವರ್ಗದವರೆಲ್ಲ ಕತ್ತೆಯ ಮೇಲೆ ಕುಳಿತು ಪಯಣ ಕೈಕೊಳ್ಳುವ ಸವಾರರು........'

' ಹೂಂ....'

' ಸಾಹೇಬರು ಹೇಳಿದರು. ಒಂದು ಕೈಚೀಲ ಕೋಳಿಯ ಮೊಟ್ಟೆ ತರಿಸು ಎಂದರು. ತರಿಸಿದೆ. ತಿಂಗಳಿಗೆ ಬರುವ ಕೂಲಿ ನಾಲ್ವತ್ತು ರೂಪಾಯಿ ಗಳಲ್ಲಿ ಈ ಸಾಹೇಬರ ಸರಬರಾಯಿಗೆ ಕಾಲು ಭಾಗ ವೆಚ್ಚ....'

' ಅದೆಲ್ಲ ಹೇಳಿ ಏನು ಪ್ರಯೋಜನ....'

' ಖರ್ಚು ಆಗಲಿ. ಆದರೆ ಅಪಮಾನವೆಂದರೆ ...! ತತ್ತಿಯನ್ನು ಹೊತ್ತುಕೊಂಡು ಬಾ ಎಂದರೆ....! ಮಾಸ್ತರೆ ಬಂಗಾಲ, ಪಂಜಾಬದ ಕಡೆ ಹಿಂದೆ ಗವರ್ನರರನ್ನು ಗುಂಡಿಕ್ಕಿದರಂತಲ್ಲ !....ಯಾತಕ್ಕಾಗಿ ? '

ಶಿಕ್ಷಕನ ಪಟ್ಟ ಏರುವ ಕಾಲಕ್ಕೆ ಅಪಮಾನ ಬಿಟ್ಟೇ ಬರಬೇಕು ಎಂಬ ಅಭಿಪ್ರಾಯಕ್ಕೆ ಇತ್ತೀಚಿನ ಅಧಿಕಾರಿಗಳು ಬಂದಂತೆ ತೋರುತ್ತದೆ....'

' ಒಂದು ಕಡೆ ಜಾತಿ, ಇನ್ನೊಂದು ಕಡೆ ಬದುಕು ! ಅಖಂಡ ಹಿಂದೂ ದೇಶ ಇಂದು ಇವತ್ತು ಇದೇ ದ್ವಂದ್ವ ಯುದ್ಧದಲ್ಲಿ ಸಿಕ್ಕು ಕರಿಮುರಿಯೋಗು ತ್ತಿದೆ. ಆಕಳನ್ನು ಕೊಂದು ಕೊರಾನವನ್ನು ಪೂಜಿಸುವವರು ಒಂದು ಕಡೆ ! ಆಕಳನ್ನು ಪೂಜಿಸಿ ಬಾಳನ್ನೇ ವೇದವನ್ನಾಗಿರಿಸಿಕೊಂಡವರು ಇನ್ನೊಂದು ಕಡೆ ! ಹಿಂದೂ ದೇಶಕ್ಕೆ ಅಖಂಡತ್ವ ಬಹಳ ಕಾಲ ಉಳಿಯಲಾರದು....'

' ಇದೇನು, ರಾಜಕೀಯಕ್ಕೆ ಇಳಿಯುತ್ತಿದ್ದೀರಿ....? '

' ಇಲ್ಲ. ಜೀವನದ ನಿಷ್ಠೆಯೆ ಹಾಗೆ. ನಿಷ್ಠೆಗಿಂತ ಪೂಜ್ಯವಾದದ್ದು ಇನ್ನೇನೂ ಇಲ್ಲ. ಪಸಿವೆಯು ಪ್ರಶ್ನೆ ಬಂದರೆ ಮಕ್ಕಳನ್ನೇ ಹರಿದು ತಿಂದಾರು. ನಿಷ್ಠೆಯ ಪ್ರಶ್ನೆ ಬಂದರೆ ತಮ್ಮನ್ನು ತಾವು ಹರಿದು ತಿನ್ನಲಿಕ್ಕೆ ಕೊಟ್ಟಾರು....'

‘ ಹೌದೂ ಅಂದೆ....’

‘ ದಯೆಯೇ ಧರ್ಮದ ಮೂಲವೆಂದರಿತವನಿಗೆ ಈ ನೌಕರಿಯ ಪ್ರಶ್ನೆ ಅತ್ಯಲ್ಪ, ಕ್ಷಣಿಕ. ‘ ಸಾಹೇಬರೇ, ಬಂದ ಹಾನಿ ಹಿಡಿಯಬೇಕು. ಇಲ್ಲವಾದರೆ.... ....’ ಎಂದು ಹೇಳಿದೆ. ಮುಂದೆ ಒಂದು ವಾರದಲ್ಲಿ ನಿಮ್ಮೂರಿಗೆ ವರ್ಗ ! ’

ಇಷ್ಟು ಹೇಳುತ್ತಲೆ ನಿಂಗಪ್ಪ ಮಾಸ್ತರು ಕಣ್ಣಿಗೆ ನೀರು ತಂದರು. ಅವರ ನಾಳೆಯ ವಿದ್ಯಾರ್ಥಿನಿ ಬನಶಂಕರಿ ಛಟ್ಟನೇ ಎದ್ದವಳೆ ಅಡುಗೆಯ ಮನೆಯಕಡೆಗೆ ಓಡಿದಳು. ಸಣ್ಣ ಹುಡುಗರು ದುಃಖವನ್ನು ಬಹುಬೇಗ ತಿಳಿದುಕೊಳ್ಳುತ್ತಾರೆಂದು ತೋರುತ್ತದೆ. ತೊಟ್ಟಿಲ ಕೂಸು ದುಃಖವದನೆಯಾದ ತಾಯಿಯ ಹಾಲನ್ನು ಕುಡಿಯುವುದಿಲ್ಲವಂತೆ !

‘ ಅವ್ವಾ, ಮಾಸ್ತರು ಒಳ್ಳೆಯವರು. ಏನೋ ಮಾತಾಡುತ್ತ ಕಣ್ಣು ಒರಸಿಕೊಂಡರು, ನೋಡು ! ಬಾಳೊತ್ತಾಯಿತು. ಅಪ್ಪನು ಅವರು ಮಾತಾಡುತ್ತಲೆ ಕುಂತಾರು... ? ’

ನಾಳೆ ಮುಂಜಾವಿನಲ್ಲಿ ಬನಶಂಕರಿಯ ತಂದೆಯೂ ನಿಂಗಪ್ಪ ಮಾಸ್ತರರಂತೆಯೆ ದುಃಖವನ್ನು ಹೊತ್ತುಕೊಂಡು ಹೋಗುವರೆನ್ನುವ ವಿಚಾರ ಪಾಪ, ಆ ಹುಡುಗಿಗೆ ಹೇಗೆ ತಿಳಿಯಬೇಕು ? ಅವಳ ತಾಯಿಗೆ ಗುರುತು. ಮಗ ಓದಿಬಂದು ಮಣ್ಣುಪಾಲಾದ ಹೊತ್ತಿಗೇ ಅದೇ ಊರಿಗೆ ಅವರು ಹೋಗಿ ಕಲಿಸಬೇಕಿತ್ತು ! ಅಲ್ಲಿ ಶಾಲೆಯ ಗೋಡೆಯ ಮೇಲೆ, ಆತ ವಾಸವಾಗಿದ್ದ ಮನೆಯಮುಂದಿನ ಕಲ್ಲಮೇಲೆ ಚೀಪಿನಿಂದ ‘ ಶಿವು ’ ಎಂದು ಕೊರೆದ ಹೆಸರು ನೋಡಿ ದುಃಖಾಗ್ನಿ ಹೊತ್ತಿಸಿ ಅನ್ನ ಉಂಡು ಕಾಲ ನೂಕಬೇಕು. ಬನಶಂಕರಿಯ ತಾಯಿ ಮಗಳ ಕಡೆಯಿಂದ ಈಚೆಗೆ ಮೊಗದಿರುಹಿ ಹೇಳಿದಳು ‘ ಊಟಕ್ಕೆ ಕರೆಯುವ್ವ ! ’

ಅದೇ ಕ್ಷಣ ಅವಳು ಹೊರಗೆ ಓಡಿ ಬಂದಳು. ಧ್ಯಾನದಲ್ಲಿ ಕರಗಿ ಹೋದ ಶಿಕ್ಷಕರಿಬ್ಬರನ್ನೂ ಬನಶಂಕರಿ ‘ ಊಟಕ್ಕೆ....’ ಎಂದು ಹೇಳಿ ಎಚ್ಚರಿಸಿದಳು. ಈಗ ನಾಲ್ಕುವರೆ ಇಲ್ಲಾ ಐದು ತಾಸು ರಾತ್ರಿಯಾಗಿರಬೇಕು.

ರೈತರ ಓಣಿಯ ಬಯಲಾಟದ ರಂಗ ತಾಲೀಮು ಜೋರಿನಿಂದ ನಡೆ ದಿತ್ತು. ಮದ್ದಳೆಯವನ ಕೈ ಒಂದೇಸವನೆ ಕುಣಿಯುತ್ತಿತ್ತು. ಕೌರವನ ಸಾಮ್ರಾಜ್ಯದ ಊಳಿಗದವನೊಬ್ಬನು 'ನಮ್ಮ ರಾಜನ ತಾರೀಪ್ ನೋಡು' ಎಂದು ಹೇಳುತ್ತ ಕುಣಿಯುವ ಹೊತ್ತಿಗೆ ನಿಂಗಪ್ಪ ಊಟ ಮುಗಿಸಿ ಹಾಸುಗೆಯ ಮೇಲೊರಗಿ ತಲೆಗಿಂಬಿಗೆ ಒಂದಿನಿತು ಓರೆಯಾಗಿದ್ದುಕೊಂಡು ಇದಿರಿಗಿರುವ ಕಿಟಕಿಯ ಸಲಾಕೆಗಳೊಳಗಿಂದ ನೋಟ ಬೀಸಿ ಆಗಸದ ನಕ್ಷತ್ರ ಗಳನ್ನೆಣಿಸುತ್ತ 'ಕುನ್ನೂರಿನಿಂದ ಹಿರೇಮಲ್ಲೂರಿಗೆ—' ಎನ್ನುತ್ತ ನಿದ್ರೆ ಹೋದರು !

* * * *

ಕುಂಕೂರಿನಿಂದ ಕುನ್ನೂರಿಗೆ—

'ಕೂ ಕೂಽ ಕೂಽಽ' ಎಂದು ಕೋಳಿ ಕೂಗುತ್ತಲೆ ನಿಂಗಪ್ಪ ಮಾಸ್ತರು ಕಣ್ಣು ತೆರೆದರು. ನಿದ್ರೆ ಹೋಗುವ ಮುನ್ನ ಮೂಡಿದ್ದ ನಕ್ಷತ್ರಗಳು ನೇಸರಿನ ಉದಯದ ಬೆಳಕಿನಲ್ಲಿ ಈಗಿಲ್ಲವಾಗಿದ್ದವು. 'ಹೊಸ ಊರು; ಹೊಸ ಬಾಳು. ಶಿವಶಿವಾ' ಎನ್ನುತ್ತಲೆ ಛಟ್ಟನೆ ಎದ್ದು ಕುಳಿತರು. ಕುಂಕೂರಿನಲ್ಲಿ ಹದಿನೈದು ವರುಷ, ಕುನ್ನೂರಿನಲ್ಲಿ ಆರು ತಿಂಗಳು ತಾವು ಕಳಿಸಿದ ದಿನಮಾನ ಗಳು ಮಾಸ್ತರರ ಕಣ್ ಮುಂದೆ ಶ್ರಾವಣದ ಪಾತಃಗಿತ್ತಿಯಂತೆ ಚಲಿಸ ತೊಡಗಿದವು. 'ಆಗಿ ಹೋದುದನ್ನು ನೆನೆ ನೆನೆದು ಏನು ಮಾಡುವುದು?' ಎನ್ನುತ್ತ ಮನಸ್ಸು ಕಲ್ಲುಮಾಡಿ ನಿಂಗಪ್ಪ ಮಾಸ್ತರು ಎದ್ದು ತುಸು ಮುಂದಕ್ಕೆ ನಡೆದು ಬಾಗಿಲ ಬಳಿ ಹೋಗಿ ನಿಂತರು. ಒಮ್ಮೆಲೆ ಒಳಗೆ ಹೋಗುವುದು ಹೇಗೆ? ಮನೆಯವರು ಬಂದು ಕರೆದರೆ ಒಳಗೆ ಹೋಗುವುದೆಂದು ಜಾಸಿ ಸುತ್ತ ಅಲ್ಲಿಯೇ ನಿಂತರು. ಬನಶಂಕರಿ ಅಷ್ಟರಲ್ಲಿಯೇ ಬಂದು 'ಮುಖ ತೊಳೆದು ಕೊಳ್ಳ ಬರ್ರಿ' ಎಂದು ಕರೆದು ಒಳಗೆ ಒಯ್ದಳು.

ತಾಸು ಹೊತ್ತೇರಿರಲಿಲ್ಲ. ಹಿರೇಮಲ್ಲೂರಿನ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳು ಪಿವಿಧ ಕಂಠಗಳನ್ನು ಒಂದೇ ಗೂಡಿಸಿ ಜೋರಿನಿಂದ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂದು ಹಾಡುವ ನಾಡ ಗೀತವು ಪ್ರಾರಂಭವಾದ ಸುದ್ದಿಯನ್ನು ಸಾರುತ್ತಿತ್ತು. ಗೀತ ಮುಗಿಯುತ್ತಲೆ

ನಿಂಗಪ್ಪ ಮಾಸ್ತರು ಸಾಲೆಯ ಒಳಗೆ ಕಾಲಿಕ್ಕಿ 'ಕೂತುಕೊಳ್ಳಿರಿ' ಎಂಬ ಆದೇಶವನ್ನಿತ್ತರು. ಸಾಲೆಯ ವಿಹಂಗಮ ನೋಟವೊಂದನ್ನು ಆ ಕೂಡಲೆ ಪಡೆದರು. ಪಡುವಣದ ಗೋಡೆ ಕುಸಿದುಹೋಗಿವೆ. ಕವಾಟುಗಳಿಗೆ ಗೆದ್ದಲಿ ಹತ್ತಿವೆ. ನೆಲವೆಲ್ಲ ತಗ್ಗು ತಂಬವಾಗಿ ಹೋಗಿದೆ. ಈಗೊ ಈ ಕ್ಷಣವೊ ಸಾಲೆಯ ಗೋಡೆಗಳು ಕತ್ತರಿಸಿಕೊಂಡು ಬೀಳುವಂತಿವೆ.

'ಮಾಸ್ತರರು ಮೇಲಿನವರಿಗೆ ರಿಪೋರ್ಟ ಮಾಡಿಲ್ಲವೇನೊ!'

'ಇಲ್ಲ. ತಿಂಗಳಿಗೊಂದು ರಿಪೋರ್ಟ ಬರೆಯುತ್ತಾರೆ. ಆದರೆ ಸ್ಕೂಲ ಬೋರ್ಡ ಆಫೀಸರರಿಗೆ, ವಿದ್ಯಾಖಾತೆಯ ಮೇಲಾಧಿಕಾರಿಗಳಿಗೆ ಕಣ್ಣಿಲ್ಲ, ತಲೆಯಿಲ್ಲ. ಸಾಲೆ ಬಿದ್ದರೆ ಊರ ಗುಡಿಗಳಿಲ್ಲವೇನು? ಗುಡಿಗಳು ಹಾಳಾಗಿದ್ದರೆ ಹಳ್ಳಿಯ ಗುಡಿಸಲುಗಳಿಲ್ಲವೇನು? ಗುಡಿಸಲುಗಳು ಮಣ್ಣುಗೂಡಿದ್ದರೆ ಹತ್ತಿರದ ಹಳ್ಳಿಯಲ್ಲೊ, ತಾಲೂಕಿನಲ್ಲೊ ಸಾಲೆಗಳಿಲ್ಲೇನು? ಅಲ್ಲಿಗೆ ಹೋಗಿ ಓದ ಬೇಕು........' ಮಾಸ್ತರರು ರಿಪೋರ್ಟ ದಾಖಲೆಯನ್ನು ನೋಡುತ್ತಿರುವಾಗಲೆ ಇಂತದೊಂದು ಸೊಲ್ಲು ಅವರಿಗೆ ಆ ದಪ್ತರಿನ ಪಾನಿನಿಂದ ಮೇಲೆದ್ದು ಬರುವಂತೆ ಕೇಳಿಬಂದಿತು.

ದಿಙ್ಮೂಢರಾದ ನಿಂಗಪ್ಪ ಮಾಸ್ತರರು ಅತ್ತಿತ್ತ ನೋಡಿದರು. ನಿಂಗಪ್ಪ ಮಾಸ್ತರರೇ, ಅದೋ ಸುಡುಗಾಡು. ಅಲ್ಲಿ ನಿಮ್ಮ ತಾದದಲ್ಲಿ ಈ ಮೊದಲು ಇದ್ದ ಮಾಸ್ತರರ ಆರು ಮಕ್ಕಳು ಮಲಗಿವೆ. ಇಗೋ, ಇಲ್ಲಿ ಮಾದಿ ಹಳ್ಳ! ವರುಷ ವರುಷವೂ ಮಾದಿ ತುಂಬಿ ಬಂದು ಸತ್ತುಹೋದ ಸಾಲೆಯ ಮಕ್ಕಳ ದುಃಖ ಸೂಚನೆಗೆಂದು ಇಲ್ಲಿ ಸಾಲೆಯ ಹೊಸ್ತಿಲೊಳಗೇ ಬಂದು ಹೋಗುತ್ತಾಳೆ. ಇದೇ ಸಾಲೆಯಲ್ಲಿ ಇಪ್ಪತ್ತು ವರುಷ ಕೆಲಸ ಮಾಡಿ ಹುಡುಗರನ್ನು ತಿದ್ದಿ ತೀಡಿ ಊರಿಗೊಂದು ಬಂಗಾರವಾಗಿದ್ದ ಶಿಕ್ಷಕರನ್ನು ವರ್ಗಾಯಿಸಿ ಕಳುಹಿಸಿದುದಕ್ಕೆ ಅಲ್ಲಿ ಅದೋ ಕೇಳಿ, ಹಕ್ಕಿಗಳ ದುಃಖಗೀತ!

ನಿಂಗಪ್ಪ ಮಾಸ್ತರರಿಗೆ ಕುತ್ತಿಗೆ ಬಿಗಿಯಿತು. ಅವರ ಇದಿರಿಗಿದ್ದ ಗಡಿಯಾರವು 'ಟಕ್ ಟಕ್' 'ಟಕ್ ಟಕ್' ಸಪ್ಪಳ ಮಾಡುತ್ತಲೆ ಇತ್ತು!

...............ಕುಂಕೂರಿನ ಸಾಲೆಯ ಹಾಗೆಯೆ ಇದೆಯಲ್ಲ ಈ ಸಾಲೆ! ಅದೇ ವಾತಾವರಣ! ಅದೇ ಹಾಳು ಗೋಡೆ, ಹಾಳು ನೆಲ! ಅದೇ ಸುಡುಗಾಡು!

ಅಲ್ಲಿ ಅದೇ ಸಾಲೆಯ ಇದಿರಿನ ಸ್ಮಶಾನದಲ್ಲಿ ಇದ್ದೊಬ್ಬ ಮಗನನ್ನು ಮಲಗಿಸಿ ಬಂದೆ. ಮಗನ ಸಾವಿನ ಯಾತನೆಯನ್ನು ಸಹಿಸುವುದಕ್ಕೂ ಮೇಲಿನವರು ಸಮಯ ಕೊಡಲಿಲ್ಲ !

ಏನು ಮಾಡಿದೆ? ಏನೆಂತ ಅಪರಾಧ ಮಾಡಿದೆ? ಅಗೋ, ಪೋಲೀಸ್ !

'ಮಾಸ್ತರರೇ, ಫೌಜದಾರ ಸಾಹೇಬರು ನಿಮ್ಮನ್ನು ಕರೆಯುತ್ತಾರೆ.'

'ಯಾಕಪ್ಪ........?'

'ನನಗೆ ಗೊತ್ತಿಲ್ಲ. ಈಗಲೆ ಹೊರಟು ಬರಬೇಕು.'

'ಏನು ತಪ್ಪು ಹೇಳಪ್ಪ ?'

'ತಪ್ಪುಗಿಪ್ಪು ಕೇಳಬಾರದು. ಮಾಸ್ತರರೇ ಈ ಸೊಕ್ಕು ಬೇಡ. ಚಳವಳಿಗೆ ನೀವೇ ಸಹಾಯ ಮಾಡುವವರು. ಮೊದಲನೆಯ ಅಪರಾಧಿಗಳು ಶಿಕ್ಷಕರು.'

'ನಡಿ. ಗುಲಾಮಗಿರಿ ಹಿಂದೂದೇಶದ ಶಿಕ್ಷಕರು ರಾಜದ್ರೋಹಿಗಳು. ಆಗಲಿ ನಡಿ. ಎಲ್ಲಿ ಚಾವಡಿಗೆ ಬರಬೇಕೇ ?'

'ಹೂಂ'

ಇದಿರಿನಲ್ಲಿ ಫೌಜದಾರ ! ಹುರಿ ಮೀಸೆ, ಕೆಂಗಣ್ಣು, ಕಪ್ಪು ಮುಖ, ಒರಟು ದೇಹ, ಕೈಯಲ್ಲಿ ಬೆತ್ತ, ಬಾಯಲ್ಲಿ ಸಿಗರೇಟು—ವೇಷ ಭರ್ಜರಿಯಾಗಿತ್ತು ಫೌಜದಾರ್ ಸಾಹೇಬರದು !

'ಏಯ್ ಮಾಸ್ತರ್........'

'ಯಾಕರೀ........'

'ನಿನ್ನೆ ನಿನ್ನ ಮನೆಯಲ್ಲಿ ಯಾರಾರನ್ನು ಕದ್ದು ಇಟ್ಟುಕೊಂಡಿದ್ದೀ ?'

'ಯಾರಿಲ್ಲ ಸಾಹೇಬರೇ. ನನ್ನ ಬಾಲ್ಯದ ಸಹಪಾಠಿಗಳು. ಈ ಊರಿಗೆ ಬಂದಾಗ ನನ್ನನ್ನು ಕಂಡರು. ಊಟದ ಹೊತ್ತು ಆದ್ದರಿಂದ ಕೂಡಿ ಊಟ ಮಾಡಿದೆವು. ಸಂಜೆಗೆ ಅವರು ಹೋದರು........'

'ಮುಚ್ಚು ಬಾಯಿ. ಬರೆ ಊಟಕ್ಕಷ್ಟೇ ಹಾಕಿದೆಯೊ? ಬಂದವರಿಗೆ ಮನೆಯಲ್ಲಿ ಮಲಗುವುದಕ್ಕೂ ಮಗ್ಗುಲಲ್ಲಿ ಅನುಕೂಲ ಮಾಡಿಸಿ

ಕೊಟ್ಟೆಯೊ ?........' ಫೌಜದಾರರು ಮಾತಿನ ಕೀಲವನ್ನೆ ಉಚ್ಚುತ್ತಿದ್ದರು. ಕವಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿಯ ಸೊಕ್ಕಿದೆಕ್ಕಲನಂತಿದ್ದ ಫೌಜದಾರರು ಒಂದೊಂದು ಮಾತನ್ನೆ ಗುರಾಣಿಯ ಹಾಗೆ ಬೀಸಿ ಮಾಸ್ತರರಿಗೆ ಎಸೆಯುತ್ತಿದ್ದರು.

'ಬೈಯಬೇಡಿರಿ. ಬಿರುನುಡಿಗಳನ್ನಾಡಬೇಡಿರಿ. ಅಯ್ಯೋ, ಹೊಟ್ಟೆಯ ಪಾಲು !'

ಫೌಜದಾರ ಬಂದು ಹೋದ ವಾರದಲ್ಲೇ ವರ್ಗ! ರೋಣ ತಾಲೂಕಿನ ಹಳ್ಳಿ ಕುಂಕೂರಿನಿಂದ ಒಂದು ಮೈಲಿನಾಚೆಗಿರುವ ಧರ್ಮ ಸಾಲೆಗೆ ಕೊಳ್ಳಿ! ಚಳವಳಿಯವರೇ ಸುಟ್ಟರು. ನಿಂಗಪ್ಪ ಮಾಸ್ತರನೇ ಪುಂಡರಿಗೆ ಅನ್ನ ಹಾಕಿ ಬೆಂಬಲ ಕೊಟ್ಟವನು. ರಾಜದ್ರೋಹೀ, ನಿನಗೆ ವರ್ಗ !

ನಿನ್ನ ಮಗ ಸತ್ತನಲ್ಲ, ಅದೇ ನಿನಗೆ ಪ್ರಾಯಶ್ಚಿತ್ತ। ಕಲಘಟಗಿ ತಾಲೂಕಿನ ಕುನ್ನೂರಿಗೆ ನಿನಗೆ ವರ್ಗ ! ಗರ್ಭಿಣಿಯಾದ ಹೆಂಡತಿಯನ್ನು ಊರು ಊರು ಪಿರಿ ಪಿರಿ ತಿರುಗಿಸಿದರೆ ನಿನಗೆ ಬುದ್ಧಿ ಬರುತ್ತದೆ. ಈ ಹಳ್ಳಿಯ ದರಿದ್ರ ಶಿಕ್ಷಕರಿಗೆ ಏನು ಪ್ರಾಯಶ್ಚಿತ್ತವಾದರೂ ಕಡಿಮೆಯೆ !

ನಿಂಗಪ್ಪ ಮಾಸ್ತರಾ, ಏ ನಿಂಗಪ್ಪಾ, ಕುಂಕೂರಿನ ಸಾಲೆಯ ಇದಿರಿಗಿರುವ ಸುಡುಗಾಡದಲ್ಲಿ ಮಗನನ್ನು ಮಲಗಿಸಿ ಕುನ್ನೂರಿಗೆ ನಾಳೆಯೆ ಹೋಗಿ ಹಾಜರಾಗು ! ಇಲ್ಲದಿದ್ದರೆ ನೌಕರಿಗೆ ಖತವು !

ನೌಕರಿಗೆ ಖತವು !

ಗಡಿಯಾಳ 'ಖಟ್ ಖಟ್' 'ಖಟ್ ಖಟ್' ಸಪ್ಪಳ ಮಾಡುತ್ತಲೆ ಇತ್ತು. ಹುಡುಗರು ಹೊಸದಾಗಿ ಬಂದ ಮಾಸ್ತರರ ಮೊಗವನ್ನು ನಟ್ಟ ದೃಷ್ಟಿಯಿಂದ ಒಂದೇ ಸವನೆ ನೋಡುತ್ತಿದ್ದರು. ಮಾಸ್ತರರ ಮನಸ್ಸು ಹಿರೇ ಮಲ್ಲೂರಿನ ಸಾಲೆಯ ಖುರ್ಚಿಯ ಮೇಲೆ ಕುಳಿತಿರಲಿಲ್ಲ !

ಕಲಘಟಗಿ ತಾಲೂಕಿನ ಹಳ್ಳಿಯ ಮುರುಕು ಮನೆಯೊಂದರಲ್ಲಿ ಹೆರಿಗೆಯ ಬೇನೆಯಿಂದ ಬಳಲುತ್ತಿರುವ ಹೆಂಡತಿಯ ಹಾಸುಗೆಯ ಬಳಿ ಕುಳಿತು ಉಪಚಾರ ಮಾಡುತ್ತಿದ್ದರು. ಹತ್ತಿರವೆ ಅವರ ಜೀವದ ಕನಸು ಆರು ವರುಷದ ಶಾಂತಿ— ಒಂದೇ ಒಂದು ಹೆಂಗೂಸು ಒಮ್ಮೆ ಅಪ್ಪನ ಮೊಗವನ್ನು, ಇನ್ನೊಮ್ಮೆ ಅವ್ವನ ಮೊಗವನ್ನು ನೋಡಿಯೆ ನೋಡುತ್ತಿತ್ತು.

'ಮಗೂ............' ಎಂದು ನಿಂಗಪ್ಪ ಮಾಸ್ತರರು ಕನಸಿನ ಲೋಕದಲ್ಲಿಯೇ ಗಟ್ಟಿಯಾಗಿ ಉಚ್ಚರಿಸಿದರು.

'ಮಾಸ್ತರೇ, ಅಪ್ಪ ಊರಿಗೆ ಹೋಗುತ್ತಾರೆ.'

'ಸಾಲೆಗೆ ಹೋಗುತ್ತಾರೇನಮ್ಮ?'

'ಹೂಂರಿ........'

ಬನಶಂಕರಿಯ ಕಣ್ಣು ತೇವವಾಗಿ ಹೋಗಿತ್ತು. ಅವಳ ಅಪ್ಪ ದೂರ ಕಲಿಸಲು ಹೋಗುತ್ತಾನಂತೆ. ಇನ್ನು ಈ ಸಾಲೆಯ ಖುರ್ಚಿಯ ಮೇಲೆ ಅಪ್ಪ ಕೂಡಲಾರ; ತನಗೆ ಕಲಿಸಲಾರ. ಬನಶಂಕರಿಯ ಕಣ್ಣಿನ ಮಂಜು ಹರಿದು ಬಿಕ್ಕಿ ಬಿಕ್ಕಿ ಅಳುವುದಕ್ಕೆ ದಾರಿ ಮಾಡಿ ಕೊಟ್ಟಿತು!

ನಿಂಗಪ್ಪ ಮಾಸ್ತರು ಖುರ್ಚಿಯನ್ನು ಸರಿಸಿ ಮೇಲಕ್ಕೆದ್ದು ಬನಶಂಕರಿಯ ಅಪ್ಪನಿಗೆ 'ಹೋಗಿ ಬರ್ರಿ' ಎಂದು ಹೇಳುವುದಕ್ಕೆ ಹೊರಗೆ ಬಂದರು.

ಇದಿರು ಬದಿರಿನಲ್ಲಿ ಇಬ್ಬರು ಶಿಕ್ಷಕರು. ಕೋಟಿನ ತೋಳು ಹರಿದಿವೆ. ರುಮ್ಮಾಲು ಹೊಲಸಾಗಿವೆ. ಬರಿಗಾಲು. ಮುಖ ಸುಕ್ಕಾಗಿ ಹೋಗಿವೆ. ಕಣ್ಣಿನ ಕಾಂತಿ ಕಳೆಗುಂದಿದೆ. ತಲೆಯ ಕೂದಲು ಬೆಳ್ಳಗಾಗಿವೆ.

'ಹೋಗಿ ಬರುತ್ತೇನೆ, ನಿಂಗಪ್ಪ ಮಾಸ್ತರೇ'

'ಹೋಗಿ ಬರ್ರಿ'

ನಿಂಗಪ್ಪ ಮಾಸ್ತರರು ನೋಡಿದರು. ದೂರ ದೂರದವರೆಗೆ ನೋಡಿದರು. ಹೆಗಲ ಮೇಲೆ ಬೀಸಾಗಿ ಛತ್ರಿ ಹಾಕಿಕೊಂಡು, ಛತ್ರಿಗೆ ರೊಟ್ಟಿಯ ಗಂಟು ತೂಗು ಹಾಕಿಕೊಂಡು, ಇನ್ನೊಂದು ಕೈಯಲ್ಲಿ ಹಾಸಿಗೆ, ಹೊದೆಯುಕೊಳ್ಳುವ ಶಾಲನ್ನು ತುಂಬಿಕೊಂಡ ಚೀಲ ಹಿಡಿದುಕೊಂಡು ಆಕಾಶವನ್ನೆ ನೋಡುತ್ತ ಹೋಗುವ ರೇಖಾ ಚಿತ್ರವೊಂದನ್ನು ನಿಂಗಪ್ಪನವರು ನೋಡುತ್ತ ಹಾಗೆಯೆ ನಿಂತಿದ್ದರು!

'ಹಾ, ಹಾ, ಗಮ್ಮತ್ ನೋಡು! ಲೋಕದ ಆಟಾ ನೋಡು!'

* * * *

ನಿಂಗಪ್ಪ ಮಾಸ್ತರು ಕೈಲೊಂದು ಅರಿವೆಯ ಗಂಟು ಹಿಡಿದುಕೊಂಡು ಕೋಟು ತೊಟ್ಟು ಹೊರಟುದನ್ನು ಬನಶಂಕರಿಯು ನೋಡಿದಳು. ಅವಳ ತಾಯಿಯೂ ಹತ್ತಿರವೇ ಇದ್ದಳು.

'ಮಾಸ್ತರೇ........' ಎಂದಿತು ಹುಡಿಗಿ

'ಊರಿಗೆ ಹೋಗಿ ಬರುತ್ತೇನಮ್ಮ. ನಿನ್ನಷ್ಟೇ ನಮ್ಮ ಶಾಂತಿ. ಆಡಲು ನಿನಗೆ ಗೆಳತಿಯನ್ನು ಕರೆದುಕೊಂಡು ಬರುತ್ತೇನೆ........'

'ಹೂಂರಿ. ಶಾಂತೂನ ಬೇಗ ಕರಕೊಂಡು ಬರ್ರಿ'

'ಹೋಗಿ ಬರುತ್ತೇನೆ ತಾಯೀ' ಎಂದು ಮಾಸ್ತರರು ಬನಶಂಕರಿಯ ತಾಯಿಗೂ ಹೇಳಿದರು.

'ಮನೆಯವರನ್ನು ಜಾಗರೂಕತೆಯಿಂದ ಕರೆದು ತರ್ರಿ.' ಎಂದು ಬನ ಶಂಕರಿಯ ತಾಯಿಯೂ ಒಂದು ಮಾತು ಹೇಳಿದರು. ಬಾಣಂತಿ ಯನ್ನು ಕರೆದು ತರಲು ಹೊರಟ ಮಾಸ್ತರರನ್ನು ಅವರು ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ ನೋಡಿದರು. ಬರಿ ಕೊಡಗಳು ಇದಿರಿಗೆ ಬಂದದ್ದನ್ನು ಕಂಡು 'ಬಾಣಂತಿಯನ್ನು ಆದಷ್ಟು ಜಾಗರೂಕತೆಯಿಂದ ಕರೆದು ತರ್ರಿ' ಎಂದು ಆ ತಾಯಿಯ ಕರುಳು ತನ್ನಷ್ಟಕ್ಕೆ ತಾನೇ ನುಡಿಯದಿರಲಿಲ್ಲ.

ಮಾಸ್ತರರು ಹೋದರು. ಶಿಗ್ಗಾವಿಯ ಮೋಟರು ಹತ್ತಿ ಕುನ್ನೂರಿನ ಕಡೆಗೆ ಲಕ್ಷ್ಯವಿಟ್ಟು ಏನನೋ ಊಹಿಸುತ್ತ ನಿಂಗಪ್ಪ ಮಾಸ್ತರು ಹೋದರು. ಅವರ ಮೋಟರು ನಡುದಾರಿಗೆ ಹೋಗಿರಬೇಕು.

ಹಿರೇಮಲ್ಲೂರಿನಲ್ಲೂ, ಸುತ್ತಣ ಹಳ್ಳಿಗಳಲ್ಲಿಯೂ ಕಾಂಗ್ರೆಸ್ಸಿನವರು ಕರಪತ್ರಗಳನ್ನು ಹಂಚಿದ್ದರು. ಮಲ್ಲೂರಿನ ಹಾಳು ಶಾಲೆಯ ಮೇಲೆ ಕಾಂಗ್ರೆಸ್ಸಿ ನವರು ಕಣ್ಣು ಇಟ್ಟಿರುವರೆಂದೂ, ಗೌಡರ ದಪ್ತರುಗಳನ್ನು ಹಾಡೇ ಹಗಲೇ ಹೊಡೆಮಕೊಂಡು ಹೋಗುವರೆಂದೂ ದಟ್ಟ ವಾರ್ತೆಯೊಂದು ಹಬ್ಬಿತ್ತು. ಪೋಲೀಸರು ಈಗ ಇನ್ನಷ್ಟು ಹೊತ್ತಿಗೆ ಬರುವವರಿದ್ದರು.

ಕರಪತ್ರಗಳು ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಸಂಬಂಧಿಸಿದ್ದವು. ಮಾಸ್ತರೇ, ವಿದ್ಯಾರ್ಥಿಗಳೇ, ಹಿಂದೂ ದೇಶದ ಬಂಧವಿಮೋಚನೆಗಾಗಿ ನಶೆ

ದಿರುವ ಈ ಹೋರಾಟದ ಯಶಸ್ಸು ನಿಮ್ಮನ್ನೇ ಪೂರ್ತಿಯಾಗಿ ಅವಲಂಬಿಸಿದೆ. ಜಗತ್ತಿನ ಯಾವುದೆ ದೇಶ ತನ್ನ ಸ್ವಾತಂತ್ರ್ಯವನ್ನು ಇನ್ನಾರಿಂದಲೂ ಅಲ್ಲ— ಬರೀ ಶಿಕ್ಷಕರಿಂದ ವಿದ್ಯಾರ್ಥಿಗಳ ಹೋರಾಟದಿಂದ ಮಾತ್ರ ಕಂಡುಕೊಂಡಿದೆ. ಜರ್ಮನಿ ತನ್ನ ಸಾಂಗ್ರಾಮಿಕ ಶಕ್ತಿಯನ್ನು ಬಲಪಡಿಸಿಕೊಂಡದ್ದು ಶಿಕ್ಷಕರ ತರಬೇತಿನಿಂದ. ಇವತ್ತಿನ ಚೀನಾ ದೇಶ ಎಂಥ ವೈಜ್ಞಾನಿಕ ಪ್ರಗತಿಯುಳ್ಳ ಜಪಾನ್ ದೇಶದ ಬೆನ್ನೆಲುವನ್ನೇ ವಿದ್ಯಾರ್ಥಿಗಳ ಸಂಘಟನಾ ಶಸ್ತ್ರದಿಂದ ಮಾತ್ರ ಮುರಿದು ಹಾಕಿದೆ. ಚೀನಾ ದೇಶದ ವಿದ್ಯಾರ್ಥಿಗಳು ಹಳ್ಳಿಪಳ್ಳಿಗಳನ್ನು ತಿರುಗಿ ವೈರಿಯನ್ನೆದುರಿಸುವ ಶಕ್ತಿಯನ್ನು 'ಗರಿಲಾ ಪಡೆ'ಯ ಮೂಲಕ ಸಂಪಾದಿಸಿ ಜಪಾನ್ ಸೈನಿಕರಿಗೆ ಏಳು ಕೆರೆಯ ನೀರು ಕುಡಿಸಿ ತತ್ತರ್ಯ್ಯನ್ನಾಡಿಸಿ ಬಿಟ್ಟಿದ್ದಾರೆ.

ಸ್ವತಂತ್ರ ಹಿಂದೂ ದೇಶದ ಹರಿಕಾರರೇ, ಈಗ ನೀವು ಮನಸ್ಸು ಮಾಡಿರಿ. ನಾಳೆಗೆ ಅಲ್ಲ, ಈ ರಾತ್ರಿಯೆ ಸಾಮ್ರಾಜ್ಯಶಾಹಿ ಸರ್ಕಾರ ಚಲೇ ಜಾವ್ ಚಳವಳಿ ಮನ್ನಿಸಿ ಹೊರಟು ಹೋಗುತ್ತದೆ. ಟಪಾಲು, ರೈಲು, ತಂತಿ, ಸರಕಾರಿ ಕಾಗದಪತ್ರ, ಈ ಆಂಗ್ಲ ಸರ್ಕಾರ ತನ್ನ ಭದ್ರತೆಗಾಗಿ ಏನೆಲ್ಲ ನಿರ್ಮಿಸಿಕೊಂಡಿದೆಯೊ ಅದೆಲ್ಲ ಭಸ್ಮೀಭೂತವಾಗಲಿ. ಅದಕ್ಕಾಗಿ ಮಾಡಿರಿ ಇಲ್ಲಾ ಮಡಿಯಿರಿ !

ಕರಪತ್ರಗಳು ಜನರ ಕೈಗೆ ಸಿಗುವುದಷ್ಟೇ ತಡ. ಹಳ್ಳಿಯ ಹುಡುಗರು ದಂಟಿಗೆ ಮೂರು ಬಣ್ಣದ ಅರಿವೆ ಸುತ್ತಿಕೊಂಡು ಊರ ತುಂಬ ಸುತ್ತಿದ್ದೆ ಸುತ್ತಿದ್ದು, ಸಾಲೆಗೆ ಬಹಿಷ್ಕಾರ ಹಾಕಿದ್ದೇ ಹಾಕಿದ್ದು !

ಹೇಗೂ ನಿಂಗಪ್ಪ ಮಾಸ್ತರು ಸಾಲೆಗೆ ನಾಲ್ಕು ದಿನ ರಜಾ ಬರದೇ ಹೋಗಿದ್ದರು. ಹುಡುಗರಿಗೂ ಸ್ವಾತಂತ್ರ್ಯದಲ್ಲಿಯೆ ಸ್ವಾತಂತ್ರ್ಯ ಸಿಕ್ಕಂತಾಯಿತು !

ಕರಪತ್ರಗಳು ಊರ ತುಂಬ ಹಾರಾಡುವುದಷ್ಟೆ ತಡ. ಆಂಗ್ಲ ಸರಕಾರದ 'ಗರಿಲಾ' ತಂಡದವರು – ಸಿ ಆಯ್. ಡಿ. ಪೋಲೀಸ್, ಫೌಜದಾರ್ ಊರೂರಿಗೆ ಪೈರಿ ಹೊಡೆದರು.

ಆ ದಿನ ಸಂಜೆ ಹಿರೇಮಲ್ಲೂರಿಗೆ ಅವರ ಮುಕ್ಕಾಂ. ಪೋಲೀಸರು ಮಾಸ್ತರರು ರಜೆಯ ಮೇಲಿರುವುದನ್ನು ಕಂಡು ಶಂಕೆಗೆ ತರಬಾರದ್ದನ್ನೆಲ್ಲ ತಂದುಕೊಂಡರು. ಇದು ಮಾಸ್ತರರದೇ ಗಮ್ಮತ್ !

ಫೌಜುದಾರರು ಕುಳಿತಲ್ಲಿ ' ವಾರಂಟು ' ತೆಗೆದರು. ' ಗೌಡರೇ, ಮಾಸ್ತರು ಊರಿಗೆ ಬರುವ ಮೊದಲೆ ನಮ್ಮ ಕಛೇರಿಯ ಖೋಲಿಯ ಹೊಸ್ತಿಲಲ್ಲಿ ಕಾಲಿಡುವಂತೆ ನೋಡಿಕೊಳ್ಳಬೇಕು ! ' ಫೌಜದಾರರ 'ಹುಕುಂ'ಗೆ 'ಜೀ' ಎಂದು ಗೌಡರು ಉಸಿರನ್ನೆಳೆಯುತ್ತಿರುವಾಗ ಕುನ್ನೂರಿನ ಕತ್ತರಿಗೆ ನಿಂಗಪ್ಪ ಮಾಸ್ತರು ಮೋಟರಿನಿಂದ ಇಳಿಯುತ್ತಿದ್ದರು.

ದಾರಿಯಲ್ಲಿ ಬರುತ್ತಿದ್ದ ಮಾಸ್ತರರನ್ನು ಒಬ್ಬಿಬ್ಬರು ಗುರುತಿಸಿ ಬರೀ ಮೊಗವನ್ನೇ ನೋಡಿದರೇ ಹೊರತು ಯಾರೂ ಮಾತನಾಡಿಸಲಿಲ್ಲ.

ನಿಂಗಪ್ಪ ಮಾಸ್ತರು ಮನೆಯ ಹತ್ತಿರ ಬಂದರು. ಎಂದೂ ಇಲ್ಲದ ಮೌನ. ಹೊಸ ಮಗುವಿನ ಉದಯದಿಂದ ಮನೆಯು ತುಂಬೆಲ್ಲ ಕಲಕಲಾಟವಿರಬೇಕಿತ್ತು. ಮಗಳ ತೊಟ್ಟಿಲ ಹಾಡು ಕೇಳಿ ಬರಬೇಕಿತ್ತು. ಆದರೆ ಏಕಿಲ್ಲ?

ತಲೆವಾಗಿಲಲ್ಲಿ ಕಾಲಿಟ್ಟ ಮಾಸ್ತರು 'ಮಗೂ' ಎಂದರು.ಮಗಳ ಬಾಯಿ ಕಟ್ಟಿತ್ತು. ಮಲೇರಿಯದ ನೆವ ಹಾಕಿ ವಿಷಮಜ್ವರ ಆರು ವರುಷದ ಎಳ ಗೂಸಿನ ಮೇಲೆ ದಾಳಿ ಮಾಡಿತ್ತು. ಹೆಂಡತಿ, ಬಾಣಂತಿ ಅಲ್ಲಿ ಮಗುವಿಗೂ ಉಪಚಾರ ಮಾಡದೆ ಮಲಗಿಕೊಂಡಿದ್ದಾಳೆ. ಹೊರಗೆ ಇನ್ನೂ ಬೆಳಕಿದೆ. ಸೂರ್ಯ ಇನ್ನೂ ಮುಳುಗಿಲ್ಲ. ಆಗಲೆ ಒಳಗೆ ಮನೆಯ ಗೂಡಿನಲ್ಲಿ ಮಿನಿ ಮಿನಿ ದೀಪ ಮಿನುಗುತ್ತಿದೆ. ದೀಪದ ಬೆಳಕಿನಲ್ಲಿ ಕಾಡುಮೌನ ವಿಹರಿಸುತ್ತಿದೆ ಬಂಗಾಲದ ಯಾವುದೊ ಒಬ್ಬ ಚಿತ್ರಕಾರ ತೆಗೆದ ಚಿತ್ರವನ್ನು ನೋಡಿದ ನೆನಪು ನಿಂಗಪ್ಪ ಮಾಸ್ತರರಿಗೆ ಒತ್ತರಿಸಿ ಬಂದಿತು !

ಒಂದು ದಿನವಾಯಿತು. ಎರಡು ದಿನ ಉರುಳಿದವು. ನಾಲ್ಕು ದಿನದ ಮಟ್ಟಿಗಿದ್ದ ರಜೆಯನ್ನು ಏಳು ದಿನಗಳವರೆಗೂ ಮುಂದೂಡಿದರು !

ಎಂಟನೆಯ ದಿನ ಕುನ್ನೂರಿನ ಮಸಣದಲ್ಲಿ ನಿಂಗಪ್ಪ ಮಾಸ್ತರರ ಮಗಳನ್ನು ಮಣ್ಣಿಗೆಂದು ತಂದಿದ್ದರು !

* * * *

ಹಿರೇಮಲ್ಲೂರಿನಿಂದ................ ?

ಧಾರವಾಡದ ಸಾರಸ್ವತಪುರದ ಕಡೆಗೆ ನಸುಗತ್ತಲಲ್ಲಿ ಯಾರೋ ಒಬ್ಬರು ಪ್ರಶ್ನಿಸುವ ದನಿ ಕೇಳುತ್ತಿತ್ತು. ಹೆಗಲ ಮೇಲೆ ಬೆಣ್ಣೆಯ ದಬರಿ ಇದ್ದಿತು. ಒಂದು ಕೈಯಲ್ಲಿ ಬಾಳೆಯ ಎಲಿ, ಲಿಂಬಿಯ ಹಣ್ಣು ಇದ್ದವು.

'ಸ್ಕೂಲಬೋರ್ಡು ಆಫೀಸರರ ಮನೆ ಎಲ್ಲಿ ಐತರೀ ?'

'ನಮಗೆ ಗೊತ್ತಿಲ್ಲಪ್ಪ'

'ಏ ಟಾಂಗಾ ಸಾಹೇಬ್........'

'ಕ್ಯಾ, ಸಾಬ್........'

'ಸ್ಕೂಲಬೋರ್ಡ ಸಾಹೇಬರ ಮನಿ ಎಲ್ಲಿ ಐತಪಾ ?'

'ಊಹೂಂ...........'

'ಏಯ್ ಪೋಸ್ಟಮನ್'

'ಓರಿ'

'ಸ್ಕೂಲಬೋರ್ಡು ಆಫೀಸರರ ಮನೆ ಎಲ್ಲಿದೆ ಹೇಳಬಲ್ಲೆಯೇನಪ್ಪ !?'

'ಇಗೋ, ಇದೇ ಬಂಗ್ಲೆ. ಹೊರಗೆ ಕೈದೋಟವಿದೆಯಲ್ಲ, ಅದೇ ನೋಡಿರಿ. ಸಾಹೇಬರು ಈಗ ಹೊರಗೆ ಆರಾಮು ಖರ್ಚಿಯ ಮೇಲೆ ಕುಳಿತಿದ್ದಾರೆ.'

ಅವಾರದ ಬಾಗಿಲು ಓರೆ ಮಾಡಿ ಸಾಹೇಬರನ್ನು ಕಾಣಲು ಹೋದವರ ಮುಖ ವಿದ್ಯುತ್‌ದೀಪದಲ್ಲಿ ಕಂಡಿತು. ಅವರೇ ಮಾಸ್ತರ ನಿಂಗಪ್ಪನವರು !

ಬಾಣಂತಿಯನ್ನು ಹಿರೇಮಲ್ಲೂರಿಗೆ ಕರೆದು ತಂದಿದ್ದಾರೆ. ವೈದ್ಯರ ಸಲಹೆಯ ಮೇರೆಗೆ ಬಾಣಂತಿಗೆ ಅತಿ ಸೂಕ್ಷ್ಮವಾದ ಆರೈಕೆ ಬೇಕಂತೆ! ಆದಷ್ಟು ಬೇಗ ತವರು ಮನೆಗೆ ಹೆಂಡತಿಯನ್ನು ಕಳುಹಿಸಬೇಕು.

ಕುಂಕೂರಿನ ಹತ್ತಿರವೆ ಹೆಂಡತಿಯ ತವರು ಮನೆ.ತಮಗೂ ಕುಂಕೂರಿಗೂ, ಇಲ್ಲವೆ ಹತ್ತಿರದ ಯಾವುದೇ ಹಳ್ಳಿಗಾದರೂ ವರ್ಗವಾದರೆ ಕ್ಷೇಮ. ವರ್ಗದ ಭಿಕ್ಷೆಗಾಗಿ ಶಾಲಾ ಶಿಕ್ಷಕ–ಭಿಕಾರಿ ಆಫೀಸರರನ್ನು ಕಾಣಲು ಬಂದಿದ್ದರು.

ಅವರು ನಿಂಗಪ್ಪ ಮಾಸ್ತರರೇನು ? ಮುಖದ ಮೇಲೆ ಬೆಳೆದ ಗಡ್ಡ, ಕೈಗೆ ಜೋಂದಂತೆ ಸುತ್ತಿದ ರುಮಾಲು – ಅವರೇ ಏನು ನಿಂಗಪ್ಪನವರು ?

'ಕೈ ಮುಗಿಯುತ್ತೇನೆ ಸಾಹೇಬರೇ'

'ಹೌದು. ನನಗೇನು ಮಾಡಬೇಕಂತೀದಿ ?'

'ಕುಂಕೂರಿನಲ್ಲಿ ಮಗನನ್ನು, ಕುನ್ನೂರಿನಲ್ಲಿ ಮಗಳನ್ನು ಮಣ್ಣಿಗಿಟ್ಟು ಬಂದಿದ್ದೇನೆ ನನಗೆ ಇನ್ನು ಜೀವನದಲ್ಲಿ ಆಸೆಯೇ ಇಲ್ಲ. ಆದರೆ ಹೆಂಡತಿಯ ಆಸೆ ಒಂದಿದೆ.........'

'ಆಸೆ ಮನುಷ್ಯನಿಗೆ ಇರಬಾರದು ಮಾಸ್ತರs........' ಸಾಹೇಬರು ಹೀಗೆನ್ನುವ ಹೊತ್ತಿಗೆ ಅವರ ಹೆಂಡತಿ ಮಾಸ್ತರು ತಂದ ಬೆಣ್ಣೆಯನ್ನು ಡಬರಿಯಿಂದ ಎತ್ತಿ ಹಾಕಿಕೊಳ್ಳುತ್ತಿದ್ದಳು ಬಾಳೆಯ ಎಲೆಯನ್ನು ಅವರ ಮಗಳು ಲಿಂಬೆಯ ಕಾಯಿಗಳನ್ನು ಅವರ ಮಗ ಬಿಡಿಸಿ ತೆಗೆದುಕೊಳ್ಳುತ್ತಿದ್ದರು. ಸಿಂಗಪ್ಪ ಮಾಸ್ತರರ ಶವದ 'ಹಾಗ' ವನ್ನು ಬಡವರು ಎತ್ತಿಕೊಳ್ಳುವುದನ್ನು ಚಿತ್ರಿಸುವಂತಿತ್ತು ಆ ನೋಟ!

'ಬಾಣಂತಿಗೆ ಆರೈಕೆ ಬೇಕಂತೆ, ಸಾಹೇಬರೆ'

'ಮಾಸ್ತರರೇ, ಮಕ್ಕಳನ್ನು ಈ ಕಂಟ್ರೋಲು ದಿನಗಳಲ್ಲಿ ಯಾಕೆ ಹಡೆಯಬೇಕು?' ಆಫೀಸರರು ಇಂತ ಉತ್ತರವನ್ನು ಕೊಟ್ಟು ಒಳಗೆ ಹೋದರು. ಬಾಯಿಯವರು ಬಂದು ಬಾಗಿಲವನ್ನು ಮುಚ್ಚಿದರು. ಸಿಂಗಪ್ಪ ಮಾಸ್ತರರು ಹಿಂದಿರುಗಿದರು.

ಹಿರೇಮಲ್ಲೂರಿಗೆಂದು ಧಾರವಾಡದಿಂದ ತಿರುಗಿ ಹೊರಟ ಮಾಸ್ತರರನ್ನು ವಿಚಾರಣೆಗೆಂದು ನಡುದಾರಿಯಲ್ಲಿಯೇ ಪೋಲೀಸಿನವರು ನಿಲ್ಲಿಸಿರುವರೆಂಬ ವಾರ್ತೆ ತಿಳಿದು ಬಂದಾಗ ಬಾಣಂತಿ ಹಾಸುಗೆಯ ಮೇಲೆ ಚಟಪಟ ಒದ್ದಾಡಿದಳು. ತೊಟ್ಟಿಲ ಕೂಸು ಅರ್ಥವಾಗದ ಧ್ವನಿಯಿಂದ ಅತ್ತಿತು.

'ಮಾಸ್ತರೇ, ನಿಮ್ಮ ಹೆಸರು?'

'ಸಿಂಗಪ್ಪ........'

'ಸಿಂಗಪ್ಪನಂತೆ ಸಿಂಗಪ್ಪ! ಭರಮಪ್ಪ ಅಲ್ಲೇನು? ಹ್ಹ ಹ್ಹ ಹ್ಹ' ಎಂದು ಫೌಜದಾರರು ಗಹಗಹಿಸಿ ನಗುತ್ತ ಪೋಲೀಸರ ಕಡೆಗೆ ನೋಡಿದರು. ಬಡ ಸಿಪಾಯಿಗಳು ರಾಜಾಜ್ಞೆಯನ್ನು ಶಿರಸಾವಹಿಸಿ ನಿಂತಿದ್ದವು!

'ನೀನು ಸಾಲಿ ಕಲಿಸುತ್ತೀಯೊ? ಏನು ಕರಪತ್ರ ಹಂಚುತ್ತ ಸಾಲೆಗೆ ಬೆಂಕಿ ಹಚ್ಚುತ್ತ ಊರೂರು ಅಲೆಯುತ್ತೀಯೋ!'

'ವರ್ಗದ ಸಲುವಾಗಿ ಆಫೀಸರರನ್ನು ಕಾಣಲಿಕ್ಕೆ ಹೋಗಿದ್ದೆ ಸಾಹೇಬರೇ'

'ವರ್ಗವಂತೆ ವರ್ಗ ! ಒಂದೇ ನೆಲ ಹಿಡಿದು ಬೀಳಲಿಕ್ಕಾಗದೇನು? ಎಷ್ಟು ಊರು ತಿರುಗಬೇಕೆಂದಿದ್ದೀ'

'ಮನೆಯಲ್ಲಿ ಹೆಂಡತಿ ಬಾಣಂತಿಯಾಗಿದ್ದಾಳೆ. ಅವಳ ಊಟ ಉಪಚಾರಕ್ಕೆ ಗತಿಯಿಲ್ಲ ಸಾಹೇಬರೇ'

'ಹೆಂಡತಿ ಬಾಣಂತಿಯಂತೆ! ಯಾರು ಅವಳಿಗೆ ಬಾಣಂತಿಯ ಪಟ್ಟ ಏರಲು ಹೇಳಿದರು ? ಸಾಲೆಗೆ ಕೊಳ್ಳಿಯಿಟ್ಟವರನ್ನು ಮೊದಲು ತಿಳಿಸು ನಿಂಗಪ್ಪ !'

ಫೌಜದಾರರು ನಿಂಗಪ್ಪ ಮಾಸ್ತರರನ್ನು ತಮ್ಮ ಪ್ರಶ್ನೆಯ ಉತ್ತರಕ್ಕಾಗಿ ತಾಲೂಕು ಕಚೇರಿಯ ಕತ್ತಲೆಯ ಖೋಲಿಯಲ್ಲಿ ಕರೆದೊಯ್ಯಲು ಸಿಪಾಯಿಗಳಿಗೆ ಸನ್ನೆ ಮಾಡಿದರು.

'ಬೇಡಿರೀ, ನಮ್ಮಪ್ಪ! ಕೈ ಮುಗಿದು ಬೇಡುತ್ತೇನೆ. ಅವರಿಗೆ ವರ್ಗ ಮಾಡಿರಿ. ಹೆಣ್ಣಿನ ಜೀವ ಕಾಯ್ದ ಪುಣ್ಯ ನಿಮ್ಮ ಪಾಲಿನದು!' ಮಾಸ್ತರರ ಹೆಂಡತಿ ಹೊರಸಿನ ಮೇಲೆ ಮಲಗಿಕೊಂಡು ಒಂದೇ ಸವನೆ ಕನವರಿಸುತ್ತಿದ್ದಳು.

'ನಿಂಗಾ ! ಯಾರು ಬೆಂಕಿ ಇಟ್ಟವರು? ಕರಪತ್ರ ಹಂಚಲು ನೀನು ಪ್ರೋತ್ಸಾಹನ ಕೊಟ್ಟದ್ದು ಸುಳ್ಳೇ ?'

'ಹೊಡೆಯಬೇಡಿರೀ ! ಕಾಲಮೇಲೆ ಬಿದ್ದು ಬೇಡುತ್ತೇನೆ. ಮಕ್ಕಳನ್ನು ಕಳೆದುಕೊಂಡು ಅವರು ನಿರ್ಜೀವರಾಗಿ ಹೋಗಿದ್ದಾರೆ. ಹೊಡೆಯಬೇಡಿರೀ....' ಬಾಣಂತಿಯ ಬಿನ್ನಹ ಮುಟ್ಟಿತೊ ಏನೊ ! ಮಾಸ್ತರರಿಗೆ ಜೀವದಾನ ದೊರಕಿತು !

ಮನೆಗೆ ಬಂದರು ನಿಂಗಪ್ಪನವರು ! ಮೌನ ಧರಿಸಿದ ಮಾಸ್ತರರು ಒಂದು ತಾಸೊತ್ತಾದರೂ ಮಾತನಾಡಲೇ ಇಲ್ಲ. ಹೆಂಡತಿ ಅವರ ಮೊಗದ ಮೇಲಿನ ಗುರುತು ನೋಡಿ ದನಿ ಮಾಡಿ ಅಳತೊಡಗಿದಳು. ಮಾಸ್ತರರು ಸುಮ್ಮನೇ ಇದ್ದರು.

ಬಾಣಂತಿ ಅಳುವುದನ್ನು ನಿಲ್ಲಿಸಿ ಸುಮ್ಮನಾದಳು. ಕೂಸು ಅಳತೊಡಗಿತು.

ಮಾಸ್ತರರು ಎದ್ದು ಹೆಂಡತಿಯ ಬಳಿ ಹೋದರು. ಸಾಧ್ವಿಯ ಕಣ್ಣಾಗೊಂಬೆಗಳು ಆಗಲೆ ಒಳಸೇರಿದ್ದವು. ಅವಳು ಕೈ ಮುಂದಕ್ಕೆ ಚಾಚಿ ಗಂಡನ ಕೈಯಲ್ಲಿ ಕೈಯಿಟ್ಟಳು.

'ಏಸು ಜನುಮದಲ್ಲಿಯೂ ಶಿಕ್ಷಕನ ಹೆಂಡತಿಯಾಗಿ ಹುಟ್ಟಿ ಬರಬೇಡಲೇ' ಎಂದು ನಿಂಗಪ್ಪನವರು ಗೋಗರೆದು ಹೊರಸಿನ ಮೇಲೆ ಬಿದ್ದು ಬಿದ್ದು ಅಳತೊಡಗಿದರು.

ಏನಾದರೂ ಅವರಿಗೆ ಹೆಂಡತಿಯಿಂದ ಉತ್ತರವೇ ಬರಲಿಲ್ಲ. ಹಿರೇಮುಲ್ಲೂರಿನ ಮಸಣವೂ ನಿಂಗಪ್ಪನವರಿಂದ ಕೊಡುಗೆಯನ್ನು ಬೇಡಿತ್ತು. ತಾಯಿಯೊಂದಿಗೆ ತೊಟ್ಟಿಲದ ಕೂಸೂ ಹೋಗಬೇಕಿತ್ತು !

ಮಾಸ್ತರರಿಗೆ ಈಗ ಏನೂ ತೋಂದರೆಯಿಲ್ಲದಂತಾಯಿತು. ಆದರೂ ಅವರು ಸಾಲೆಗೆ ಹೋಗಲೆ ಇಲ್ಲ. ಚಳವಳಿ ನಡದೆ ಇತ್ತು. ಹುಡುಗರು ಸಂಪು ಹೂಡಿಯೆ ಇದ್ದರು ಒಂದು ದಿನ ಇದ್ದಕ್ಕೆ ಇದ್ದಂತೆಯೇ ನಿಂಗಪ್ಪ ಮಾಸ್ತರು ಕಾಣದಾದರು !

ಮತ್ತೆ ಎಲ್ಲಿಗೆ ಹೋದರು ನಿಂಗಪ್ಪ ಮಾಸ್ತರು? ಕೆಲವರು ಧಾರವಾಡಕ್ಕೆ ವರ್ಗಮಾಡಿಸಿಕೊಂಡು ಬರಲು ಹೋಗಿದ್ದಾರೆಂದು ಹೇಳುತ್ತಾರೆ. ಕೆಲವರು ಅವರನ್ನು ಕುನ್ನೂರಿನ ಸುಡುಗಾಡಿನಲ್ಲಿಯೂ, ಬೇರೆ ಕೆಲವರು ಅವರನ್ನು ಕುಂಕೂರಿನ ಮಸಣ ಭೂಮಿಯ ಮೇಲೆಯೂ ತಿರುಗಾಡುತ್ತಿದ್ದುದನ್ನು ಕಂಡರಂತೆ! ಇನ್ನು ಹಲವರು ಅವರನ್ನು ಧಾರವಾಡದ ಎಂತದೋ ಆಸ್ಪತ್ರಿಯಲ್ಲಿ ನೋಡಿದರಂತೆ !

ಯಾರಿಗೂ ನಿಶ್ಚಿತವಾದ ಸುದ್ದಿಯೇ ಗುರುತಾಗಲಿಲ್ಲ. ಬನಶಂಕರಿಯ ತಂದೆ ಸುದ್ದಿಯನ್ನು ತರಲು ನಿಶ್ಚೈಸಿ ಧಾರವಾಡಕ್ಕೆ ಹೋಗಿದ್ದಾರಂತೆ! ಊರಿಗೆ ಊರೇ ನಿಂಗಪ್ಪ ಮಾಸ್ತರ ಸುದ್ದಿಯನ್ನು ಕೇಳಲು ಹಾರೈಸಿಕೊಂಡು ಕುಳಿತಿದೆ. ಏನು ವಾರ್ತೆ ತರುತ್ತಾರೋ ಶಿವನೇ ಬಲ್ಲ!

# ಓಲೆಕಾರ ಬೋಲಾ!

ಬನಶಂಕರಿಯ ತಂದೆಗೆ ಕಳಸಕ್ಕೆ ವರ್ಗವಾದ ಸುದ್ದಿ ಒಂದೊಡನೆಯೆ ಹಿರೇಮಲ್ಲೂರಿನಲ್ಲಿಯ ಕೆಲವರು ಹಿರಿಯರು ತಂತಮ್ಮ ಮಕ್ಕಳನ್ನು ಕಳಸದ ಶಾಲೆಗೆ ವರ್ಗಮಾಡಿದರು. ಅವರಿಗೆ ಚನ್ನಪ್ಪ ಮಾಸ್ತರರಲ್ಲಿ ವಿಶ್ವಾಸವಿದ್ದಿತು. ಮಾಸ್ತರರ ಪಾಲಿಗೆ ಓದು ಕಲಿಸುವದು ಬರೀ ಒಂದು ವೃತ್ತಿಯಾಗಿರಲಿಲ್ಲ. ಅದೊಂದು ಕಾಯಕವೆಂದು ಅವರು ನಂಬಿದ್ದರು. 'ಶಿಲ್ಪಿ ಉಳಿಯಿಂದ ಕಲ್ಲಿನಲ್ಲಿ ಜೀವವನ್ನು ತುಂಬುತ್ತಾನೆ. ಕವಿ ಲೇಖನಿಯ ಮೂಲಕ ಇಳೆಯಲ್ಲಿ ಸ್ವರ್ಗ ಸುಖವನ್ನು ತರುತ್ತಾನೆ. ಶಿಕ್ಷಕನು ಅಕ್ಷರಭ್ಯಾಸದ ಮೂಲಕ ಮಾನವನನ್ನು ಬುದ್ಧಿ ಜೀವಿಯನ್ನಾಗಿ ಮಾಡುತ್ತಾನೆ' ಎಂಬ ನಂಬಿಕೆ ಮಾಸ್ತರರದು. ಇರುವಷ್ಟು ಕಾಲ ವಿಶ್ವಾಸದಿಂದ ತಮ್ಮ ಪಾಲಿನ ಕರ್ತವ್ಯವನ್ನು ಮನಮುಟ್ಟಿ ಮಾಡೋಣವೆಂದು ನಂಬಿ ಬಾಳನ್ನು ಹೊರೆಯುತ್ತಿದ್ದ ಅವರು ಊರವರಿಗೊಂದು ಪ್ರೇಮದ ವಸ್ತುವಾಗಿದ್ದರು. ಹೀಗಿದ್ದ ಮಾಸ್ತರರಿಗೆ ವರ್ಗವಾದ ಸುದ್ದಿ ಊರವರಿಗೆ ಕರ್ಣಕಠೋರವಾಗಿ ಪರಿಣಮಿಸಿತು. ಜನರೆಲ್ಲ ಮರುಗಿದರು. ಮುಪ್ಪಿನಲ್ಲಿ ಊರೂರು ತಿರುಗುವಂತಾಯಿತೇ ಎಂದು ಹಂಬಲಿಸಿದರು. ಮಾಸ್ತರರ ಸಾತ್ವಿಕ ಬದುಕಿನ ಹೆಜ್ಜೆಯಲ್ಲಿಯೇ ತಮ್ಮ ಮಕ್ಕಳು ಹೆಜ್ಜೆಯಿಡಲು ಕಲಿಯಬೇಕೆಂದು ಭಾವಿಸಿ ಊರಿನ ಕೆಲವರು ಅವರ ಸಮ್ಮುಖದಲ್ಲಿಯೇ ತಮ್ಮ ಮಕ್ಕಳನ್ನು ಓದಿಸಲು ಮುಂದಾದರು.

ಅವರಲ್ಲಿ ಓಲೆಕಾರ ಬೋಲಾ ಒಬ್ಬಾತ. ಮಾಸ್ತರರು ಮನೆಯೊಳಗೆ ಊರಿಗೆ ಹೋಗುವ ಸಿದ್ಧತೆಯಲ್ಲಿ ತೊಡಗಿದ್ದರು. ಬೋಲಾ 'ಸಲಾಂ' ಮಾಡುತ್ತ ಹೊಸ್ತಿಲಲ್ಲಿ ಕಾಲಿರಿಸಿ ಮಾಸ್ತರರ ಮುಂದೆ ಬಂದು ನಿಂತು ವರ್ಗವಾದ ವಾರ್ತೆಯನ್ನು ನಿಷೇಧಿಸುತ್ತ ತನ್ನದೊಂದು ಬೇಡಿಕೆಯನ್ನು ದೀನ ಸ್ವರದಿಂದ ಮುಂದಿರಿಸಿದನು.

ಮಾಸ್ತರರು ನಕ್ಕರು. 'ಬೋಲಾ, ನಿನ್ನ ಅಭಿಮಾನವಷ್ಟೇ ನನಗೆ ಸಾಕು. ಅದೇ ನನ್ನ ಸಂಪತ್ತೆಂದು ತಿಳಿಯುತ್ತೇನೆ. ಈಗಲೇ ಹೋಗಿ ಸಿದ್ದ

ನನ್ನ ಸನ್ನೊಂದಿಗೆ ಕಳಿಸುವುದಕ್ಕೆ ತಯಾರು ಮಾಡು ಅವ ನಿನ್ನಂತೆ ಓಲೆಕಾರನಾಗುವುದು ಬೇಡ. ಈ ಓಲೆಕಾರಿಕೆ ನಿನ್ನೊಂದಿಗೇ ಮುಗಿಯಲಿ. ನಿನ್ನ ಮಗ ಮಾಸ್ತರನಾಗಲಿ. ಅವನ ಮಕ್ಕಳು ಅವನಿಗಿಂತ ಇನ್ನೂ ದೊಡ್ಡವರಾಗಲಿ. ಕಾಳಜೀ ಬೇಡ, ಹೋಗು. ಈಗಲೇ ಸಿದ್ದನನ್ನು ಕಳಿಸು' ಎಂದು ಬೋಲಾನಿಗೆ ಹೇಳಿದರು.

ಬೋಲಾ ಉಬ್ಬಿ ಹೋದ. ಮುಪ್ಪು ಮುಖದ ಮೇಲೆ ಇಳಿಯುತ್ತ ಬಂದುದನ್ನು ಆ ಕ್ಷಣವೆ ಅವನು ಮರೆತು ಬಿಟ್ಟನು. ಓಲೆಕಾರಿಕೆಯ ದಂಡ ಹಿಡಿದು ಒರಟಾಗಿ ಹೋದ ಕೈಗಳಲ್ಲಿ ಸಿರಿ ಸಂಪತ್ತಿನ ರೇಖೆಗಳು ಪುಟ ಪುಟನೆ ಮೂಡಿ ಬಂದಂತೆ ಅವನಿಗೆ ಭಾಸವಾಯಿತು. 'ನಿನ್ನ ಮಗ ನಿನ್ನಂತೆ ಓಲೆಕಾರನಾಗುವುದು ಬೇಡ ಈ ಓಲೆಕಾರಿಕೆ ನಿನ್ನೊಂದಿಗೇ ಮುಗಿಯಲಿ............ ಶಹಬ್ಬಾನ್, ಮಾಸ್ತರರೇ ! ನನ್ನ ಮುಪ್ಪಿನ ಬದುಕಿನಲ್ಲಿ ಅಮೃತ ಮಂತ್ರ ತುಂಬಿದಿರಿ ಕೂಡಲೇ ಮಗನನ್ನು ಕಳಿಸುತ್ತೇನೆ. ಈಗಲೆ........!' ಬೋಲಾ ಮಾಸ್ತರರ ಸಮಕ್ಷಮದಲ್ಲಿ ಮೌನದಿಂದ ನಿಂತಿದ್ದರೂ ಅವರೊಡನೆ ಹೀಗೆಯೆ ಮಾತನಾಡುತ್ತಿದ್ದಂತೆ ಅವನಿಗನ್ನಿಸಿತು

'ಸಲಾಂ, ನಮ್ಮಪ್ಪ. ಸಿದ್ದ ನಿಮ್ಮ ಮಗ. ಅವನ ಸುಖದುಃಖ ನಿಮ್ಮದು...........'

'ಕಾಳಜೀ ಬೇಡ, ಹೋಗು. ಕರೆದು ತಾ ಸಿದ್ದನನ್ನು' ಬೋಲಾ ಮನೆಗೆ ಕೂಡಲೇ ಹಿಂತಿರುಗಿದ. ಮನೆಗೆ ಬಂದು ಮಗನನ್ನು ಮಾಸ್ತರರೊಡನೆ ಕಳುಹಿಸುವವರೆಗೆ ಅವನ ಮನಸ್ಸು ನಿಂತಲ್ಲಿಯೇ ನಿಲ್ಲಲಿಲ್ಲ. ಕಾಲು ನೆಲಕ್ಕೆ ಪೂರ್ತಿಯಾಗಿ ಹಚ್ಚಲೇ ಇಲ್ಲ. ಅವನಿಗೆರಡು ಗಟ್ಟಿಯಾದ ಅರಿವೆ ಅಂಚಡಿ, ಅವನಿಗೊಂದೆರಡು ಪುಸ್ತಕ, ಅವನ ದಾರಿಯ ಬುತ್ತಿಯ ಊಟ— ಹನ್ನೆರಡು ಮೈಲಿಗಳಾಚೆಗಿರುವ ಕಳಸಕ್ಕೆ ಬೀಳ್ಕೊಡುವ ಮಗನಿಗಾಗಿ ಬೋಲಾ ನಡಸಿರುವ ಸಿದ್ಧತೆಯನ್ನು ನಗರದ ಧನಿಕರು ನೋಡಿದರೆ ನಾಚಿಕೆಯಿಂದ ತಲೆ ತಗ್ಗಿಸಬೇಕು. ಇಲ್ಲವೆ ಹೆಮ್ಮೆಯಿಂದ ಗಟ್ಟಿಯಾಗಿ ನಗಬೇಕು.

'ಹೂಂ. ಪರವೂರು ಪರಾಣ ಸಂಕಟ ನಿಮಗೇನು' ಎಂದು ಬೋಲಾ ಯಾರಿಗೋ ನುಡಿಯುತ್ತ ತನ್ನ ಕಾರ್ಯದಲ್ಲಿ ತೊಡಗಿಯೇ ಇದ್ದನು. ಸಿದ್ಧನನ್ನು ಕಳಿಸಿಕೊಡಬೇಕೆಂದು ಮಾಸ್ತರರು ಹೇಳಿ ಕಳುಹಿಸಿ ಕೊಡುವ ವರೆಗೂ ಮಗನ ದಾರಿಯ ಸಿದ್ಧತೆ ಮುಂದುವರಸಿಯೇ ಮುಂದುವರಸಿವನು. ಮಗನನ್ನು ಬೀಳ್ಕೊಡುವ ಜಾವ ಕೊನೆಗೊಮ್ಮೆ ಬಂದೇ ಬಿಟ್ಟಿತು.

ಒಂದು ಶಾಲೆಯ ಭಾಗ್ಯವನ್ನು ಇನ್ನೊಂದು ಶಾಲೆಗೆ ತುಂಬಿಸುವ ದಿನ! ಹಿರೇಮುಲ್ಲೂರಿನ ಮಾದಿ ಹಳ್ಳದ ಮೇಲೆ ಜನ ನಿಂತುಕೊಂಡು ನೋಡುವ ನೋಟ ಅದು!

ಮಾಸ್ತರರು ಹೆಗಲ ಮೇಲೆ ಕೊಡೆಯಿರಿಸಿಕೊಂಡು ಅದರ ಎರಡೂ ಮಗ್ಗಲಿಗೆ ಎರಡು ಚೀಲಗಳನ್ನು ತೂಗು ಹಾಕಿಕೊಂಡು ಹಳ್ಳದಾಟುತ್ತಿರುವ ಚಿತ್ರ! ಧೋತರವನ್ನು ಮೇಲಕ್ಕೆ ಒಂದು ಕೈಯಿಂದ ಏರಿಸಿ ಇನ್ನೊಂದು ಕೈಯಿಂದ ಕೊಡೆ ಹಿಡಿಮಕೊಂಡು ಆಚೆಗೆ ಈಚೆಗೆ ನೋಡುತ್ತಿದ್ದಾರೆ. ಅವರ ಇದಿರಿನಲ್ಲಿ ಮುಳ್ಳು ಕೊಂಪೆಯೊಂದು ತೇಲಿ ಬರುತ್ತಿದೆ. ಹುಡುಗರು ಸಿದ್ದ, ತಿಪ್ಪ, ಶಿವು, ಗಂಗು, ಈರು............ ಅವರ ಸುತ್ತು ಮುತ್ತು ಬರುತ್ತಿವೆ. ಮುಳ್ಳು ಕೊಂಪೆ ಹುಡುಗರನ್ನು ಮುಟ್ಟಲಾರದು! ಮಾಸ್ತರರು ಹತ್ತಿರವೇ ಇದ್ದಾರೆ!

ಬೋಲಾ, ಬನಶಂಕರಿ......... ಇನ್ನು ಯಾರಾರೋ ದಂಡೆಯ ಮೇಲೆ ನಿಂತುಕೊಂಡು ನೋಡುತ್ತಿದ್ದಾರೆ! ಮಾಸ್ತರರು ಹಳ್ಳ ದಾಟಿದರು.

'ಶಂಕರಮ್ಮ........' ಬೋಲಾ ಕೂಗಿದ. ಹುಡುಗಿ ನೋಡಿತು.

'ಬೋಲಾ ......' ಹುಡುಗಿ ಅಂದಿತು. ಬೋಲಾ ನೋಡಿದ.

'ಅಪ್ಪ ಹೋದನಪ್ಪ' ಬೋಲಾ ನುಡಿದ.

'ಸಿದ್ದಪ್ಪ ಹೋದನಪ್ಪ' ಆಕೆ ನುಡಿದಳು.

ಓಲೆಕಾರ— ಅಲ್ಲ, ಸಿದ್ದನ ಅಪ್ಪ ಬೋಲಾ ಲಂಗವುಟ್ಟು ನಿಂತಿದ್ದ ಮಾಸ್ತರರ ಸಣ್ಣ ಮಗಳ ಮುದ್ದು ಗಲ್ಲವನ್ನು ಎರಡೂ ಕೈಗಳಿಂದ ಮುಟ್ಟಿದನು. ಕೈಮುಟ್ಟಿ ಕೈತೆಗೆದು ಕೊಳ್ಳುವ ಹೊತ್ತಿಗೆ ಅದು ಉಪ್ಪು ನೀರಿನ ಸ್ಪರ್ಶವನ್ನು ಪಡೆದಿತ್ತು! ಅಪ್ಪ ಊರನ್ನು ಬಿಟ್ಟು ಹೋಗುತ್ತಿದ್ದಾನೆ! ಮಗು ತಂದೆಯಿಂದ ದೂರವಾಗುತ್ತಿದೆ.

ಹಳ್ಳ ದಾಟಿದ ಮಾಸ್ತರರು ಅಗಸೆಯ ಒಡ್ಡಿನ ಮೇಲೆ ನಿಂತವನಿಗೆ ಹಿಂದಿರುಗಲು ಕೈ ಬೀಸಿದರು. ಬೋಲಾನಿಗೆ ಕೈಬೀಸಿ ಪ್ರತ್ಯುತ್ತರ ಕೊಡುವುದಕ್ಕೆ ಶಕ್ತಿಯೇ ಇರಲಿಲ್ಲ.

ಅವರೆಲ್ಲ ಎರಡು ದಾರಿ ಹಿಡಿದು ಹೋದರು.

* * *

ಹೋಳಿ ಹುಣ್ಣಿಮೆಯು ಸಮೀಪ ಸಮೀಪ ಬರುತ್ತಿದ್ದಿತು. ಮೊದಲೇ ಅಗಸ್ಟ ಚಳವಳಿಯ ಕಾಲ. ಕಾಂಗ್ರೆಸ್ಸಿನವರ ಕರಪತ್ರಗಳು ಒಂದರ ಮೇಲೊಂದು ಸಾಗಿ ಸಾಗಿ ಬರುತ್ತಿದ್ದವು. ಇದು ಬರೀ ಕಾಮದಹನವಲ್ಲ; ಸಾಮ್ರಾಜ್ಯಶಾಹಿಯ ದಹನ, ಚರ್ಚಿಲ್ ಮಂತ್ರಿಯ ಆಶಾ ದಹನ. ಅವನದೇ ಮೂರ್ತಿ ಮಾಡಿಸಿ ಅಗಸನ ವಾಹನದ ಮೇಲೆ ಕುಳ್ಳಿರಿಸಿ ಸುಡಿರಿ ಕೋಟ್ಯಂತರ ಜನತೆಯನ್ನು ದಾರಿದ್ರ್ಯದ ಅಗ್ನಿಕುಂಡದಲ್ಲಿ ನೂಕಿ ಚಪ್ಪಾಳೆ ಹೊಡೆದು ಗಹಗಹಿಸಿ ನಕ್ಕ ಈ ಸಾಮ್ರಾಜ್ಯಶಾಹಿಯ ಪ್ರತೀಕವಾದ ಕಾಮನನ್ನು ಊರ ತುಂಬೆಲ್ಲ ಮೆರವಣಿಗೆ ಮಾಡಿ ಸುಡಿರಿ– ಎಂಬ ಸಂದೇಶವನ್ನೊಳಗೊಂಡ ಕರಪತ್ರಗಳು ಶಾಲೆಯ ಗೋಡೆಗಳ ಮೇಲೆ ಗುಡಿಯ ಮುಂಗಡೆಯಲ್ಲಿ ಅಲ್ಲೆ ಇಲ್ಲೆ ಎಲ್ಲೆಲ್ಲೂ ಹರಹಿ ತಮ್ಮ ಕಾರ್ಯವನ್ನು ಮಾಡತೊಡಗಿದ್ದವು.

ಹೋಳಿ ಹುಣ್ಣಿಮೆಯ ಹಬ್ಬದೊಂದಿಗೆ ಸರಕಾರದ ಹುಕುಮೂ ಬಂದಿತು ಪ್ರತಿಯೊಂದು ಹಳ್ಳಿಯಲ್ಲಿ ಹುಕುಮನ್ನು ಡಂಗುರದ ಮೂಲಕ ಸಾರಿ ಹೇಳುವದಕ್ಕೆ ಮೇಲಿನವರಿಂದ ಅಪ್ಪಣೆ ಆಯಿತು. ಗೌಡರು ಓಲೆಕಾರನಿಗೆ ಆ ಆಜ್ಞೆ ಮಾಡಿದರು.

'ಬೋಲಾ' ಎಂದು ಮಲ್ಲೂರಿನ ಗೌಡರು ಕೂಗಿದರು. 'ಸಲಾಂ' ಹೊಡೆದು ಬೋಲಾ ಗೌಡರಿದಿರು ಬಂದು ನಿಂತನು. ಅವರು ಹುಕುಮು ತಿಳಿಸಿದರು. ಅವರಿತ್ತ ಆಜ್ಞೆಯನ್ನು ಸ್ವೀಕರಿಸಿ ಡಂಗುರವನ್ನೆತ್ತಿಕೊಂಡು ಅಂಗಳಕ್ಕಿಳಿದನು. ನಾಡಿನ ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲಿ ಆ ತೆರನಾದ ಡಂಗುರದ ವಾರ್ತೆ ಹಬ್ಬಿ ಹರಿಯುತ್ತಿದ್ದಿತು.

ಕೇಳಿರಿ, ಕೇಳಿರಿ. ಹೋಳಿಯ ಹಬ್ಬ ಯಾರೂ ಮಾಡಬಾರದು. ಮಾಡಿದವರಿಗೆ ಮೂರು ತಿಂಗಳ ಸಜಾ ಕೇಳಿರಿ'?

ಕಳಸದ ಸಾಲೆಯಲ್ಲಿ ಮನೆಯಲ್ಲಿ ಕುಳಿತುಕೊಂಡ ಸಿದ್ದ ಓಣಿಯು ಅಂಗಳದಲ್ಲಿ ಡಂಗುರದ ಸಪ್ಪಳದ ಜತೆಗೆ ಹರಿಯುತ್ತ ಬಂದ ವಾರ್ತೆಯನ್ನು ಮೈಯನ್ನೆಲ್ಲ ಕಿವಿಮಾಡಿ ಕೇಳಿದನು. ಮಾಸ್ತರರ ಕಡೆಗೊಮ್ಮೆ ನೋಡಿದನು. ಅವರು ಕೆಳಗಿನ ವರ್ಗದ ವಿದ್ಯಾರ್ಥಿಗಳ ಪಾಠ ಒಪ್ಪಿಸಿ ಕೊಳ್ಳುತ್ತಿದ್ದು ದನ್ನು ಕಂಡು ಅವರ ಕಣ್ಣು ತಪ್ಪಿಸಿ ಹೊರಗೆ ಬಂದನು.

ಕಳಸದ ಓಲಿಕಾರನು ಡಂಗುರ ಹೊಯ್ಯುತ್ತ ಸರಕಾರದ ಹುಕುಮನ್ನು ಉಚ್ಚ ಕಂಠದಿಂದ ಕೂಗಿ ಹೇಳುತ್ತಿದ್ದನು.

ಆ ವಾರ್ತೆಯನ್ನು ಕೇಳುತ್ತಿದ್ದಂತೆಯೇ ಸಿದ್ದನು ಜೋರನೆ ಬೆವೆತನು. ಕೈ ಕಾಲುಗಳು ನಡ ನಡನೆ ನಡುಗ ತೊಡಗಿದವು. ಅಪರಾಧಿಯು ತಳೆಯಬಹುದಾದ ಮುರುಕದ ನೋಟ ಅವನ ಮೊಗದ ಮೇಲೆ ಕುಳಿತುಕೊಂಡು ತಲೆಯನ್ನು ಮೇಲಕ್ಕೆತ್ತದಂತೆ ಮಾಡಿತು. ಸಿದ್ದನು ಆದೇ ಆಗ ೧೮೫೭ ನೆಯ ಇಸವಿಯ ಬಂಡಾಯದ ಇತಿಹಾಸವನ್ನು ಓದಿ ಹೊರಗೆ ಬಂದಿದ್ದನು.

'ಹಿರೇಮುಲ್ಲೂರಿನಲ್ಲಿ ನನ್ನ ಅಪ್ಪನೂ ಹೀಗೆಯೇ ಡಂಗುರ ಹೊಡೆಯುತ್ತಿರಬೇಕು. ಇದೇ ಪಾಪದ ಕೃತ್ಯವನ್ನು ಬಡತನವು ಅವನಿಂದ ಮಾಡ ಹಚ್ಚಿರಬೇಕು ...........' ಹದಿನಾರು ವರುಷದ ಸಿದ್ದನ ಮನಸ್ಸು ಇದ್ದಕ್ಕಿದ್ದಂತೆಯೆ ತಾರುಣ್ಯದ ತೇಜಸ್ಸಿನಿಂದ ಉಕ್ಕತೊಡಗಿತು.

'ಅಪ್ಪಾ........'

'ಮಗೂ........'

'ಮುಪ್ಪಿನಲ್ಲಿ ಇಂತ ಮಹಾ ಅಪರಾಧ ನಿನ್ನಿಂದ ಮಾಡಿಸಲು ನಾನು ಮಗನಾಗಿ ಮೂಡಿ ಬಂದೆನೇ........' ಮುಲಕಿ ಪರೀಕ್ಷೆಗಾಗಿ ಓದುತ್ತಿದ್ದ ವಿದ್ಯಾರ್ಥಿಯು ಆಗಸದ ಕಡೆಗೆ ಗದ್ಗದಿತ ಕಂಠದಿಂದ ನುಡಿಯುತ್ತ ಉಗುಳು ನುಂಗುತ್ತಿದ್ದನು.

'ಇಲ್ಲ, ಸಿದ್ದಾ. ನಿನ್ನ ಮಾಸ್ತರರು ನನಗೆ ಹೇಳಿದ್ದಾರೆ. ಈ ಓಲಿಕಾರಿಕೆ ನನ್ನೊಂದಿಗೇ ಮುಗಿಯಲೆಂದು ಅವರು ಹಂಕೆಯುತ್ತಿದ್ದಾರೆ. ಚಿಂತಿಸಬೇಡ. ನೀನು ಮಾಸ್ತರನಾಗುವಿ. ನಿನ್ನ ಮಕ್ಕಳು ನಿನಗಿಂತಲೂ ದೊಡ್ಡವರಾಗುವರು.

'ಮಹಾಪಾಪ........'

'ಪ್ರಾಯಶ್ಚಿತ್ತ........'

ಡಂಗುರದ 'ಢಣ್' ಎಂಬ ಸಪ್ಪಳ ಸಾಲೆಯ ಬಾಗಿಲದ ಬಳಿಗೇ ಬಂದಿತು. ಸಿದ್ಧ ಮೂರ್ಛೆ ಹೋದನು. ಮಾಸ್ತರರು ಓಡಿ ಬಂದರು. ವೈದ್ಯರು ಪರೀಕ್ಷಿಸಿ ಹೇಳಿದರು. ಸಿದ್ಧನಿಗೆ ಪಿತ್ಥ ಜಾಸ್ತಿ ಆಗಿತ್ತಂತೆ!

* * *

ಕಳಸದ ಸಾಲೆಯ ಮುಂಗಡೆಯಲ್ಲಿ ಮೂರ್ಛೆ ಹೋದ ಸಿದ್ಧ ಹಿರೇಮಲ್ಲೂರಿನಲ್ಲಿ ನಡೆದ ದೃಶ್ಯವೊಂದನ್ನು ಕಂಡನು.

ಬೋಲಾ ಡಂಗುರ ಹೊಡೆಯುತ್ತ ಹೊಡೆಯುತ್ತ ಮಾಸ್ತರರ ಮನೆಯ ಮುಂದೆ ಬಂದನು. ಎಂದಿನಂತೆ ಡಂಗುರ ಹೊಡೆಯುವಂದು ಊರಿನ ಬಾಲಕರೆಲ್ಲ ಸಕ್ಕರಿಗೆ ಇರುವೆ ಮುಕ್ಕರಿಯುವಂತೆ ಬೋಲಾನನ್ನು ಸುತ್ತಿ ಮುತ್ತಿದ್ದರು. ಅವನು ಡಂಗುರ ಹುಯ್ಯುವದು, ಕೂಗಿ ಕೂಗಿ ಹೇಳುವದು ಅದೇ ಹುಡುಗರಿಗೊಂದು ಸಂತಸದ ದೃಶ್ಯ! ಹುಡುಗರೆಲ್ಲ ಕಣ್ಣು ಬಿಡುತ್ತ ನೋಡುವರು; ಮನೆಯ ಮುದಿಕೆಯರನ್ನು ಹಿಡಿಸಿ ಬೋಲಾನಿಂದ ತಮ್ಮ ಮನೆಯ ಮುಂದೆಯೂ ಇನ್ನೊಮ್ಮೆ ಡಂಗುರ ಸಾರ ಹೇಳುವರು. ತೊಂದರೆ ಯಾದರೂ ಚಿಂತೆಯಿಲ್ಲ, ಬೋಲಾ ಒಲ್ಲೆನ್ನಲಾರ. ತನ್ನಿಂದ ಮಕ್ಕಳಿಗೆ ತೃಪ್ತಿಯಾದರೇ ಸಾಕೆಂಬ ಹಿಗ್ಗು ಅವನಿಗೆ.

ಮಾಸ್ತರರ ಮನೆ ಬಂದಿತು. ಬನಶಂಕರಿ ಓಡಿ ಬಂದಳು. 'ಡಂಗುರ! ಬೋಲಾ! ಅವ್ವಾ, ನಮ್ಮ ಮನೆಯ ಮುಂದೊಮ್ಮೆ ಹೊಡೆಯ ಹೇಳು, ಕೂಗ ಹೇಳು' ಎಂದು ಒಂದೇ ಸವನೆ ತಕಪಕನೆ ಕುಣಿಯುತ್ತ ತಾಯಿಯನ್ನು ಹಿಡಿಸಿ ಬೋಲಾನಿಗೆ ಡಂಗುರ ಹೊಡೆಯಲು ಹೇಳಿಸಿದಳು.

ಬೋಲಾನಿಗೆ ಅತ್ಯಂತ ಸಂತಸವಾಯಿತು. ಮಾಸ್ತರರು ತನ್ನ ಮಗ ನನ್ನು ಹೊಟ್ಟೆಯ ಮಗನಂತೆ ನೋಡಿಕೊಂಡು ಓದು ಹೇಳುತ್ತಿದ್ದಾರೆ. ನನ್ನ ಓಲೆಕಾರಿಕೆ ನನ್ನೊಂದಿಗೇ ಮುಗಿಯುವುದು ಮಗ ಮಾಸ್ತರನಾಗುವ. ಅವನ ಮಕ್ಕಳು ದೊಡ್ಡವರಾಗುವರು. ಮಣ್ಣಿನಿಂದ ಮೂರ್ತಿಯನ್ನು ಮಾಡಿದ ಮಾಸ್ತರರಿಗೆ ಪ್ರತಿಯಾಗಿ ನಾನೇನನ್ನು ಕೊಡಬಲ್ಲೆ! ಇನ್ನೊಮ್ಮೆ ಡಂಗುರ ಹೊಡೆದು ಅವರ ಮಗು ಬನಶಂಕರಿಯನ್ನು ಮಾತ್ರ ತೃಪ್ತಿಪಡಿಸಬಲ್ಲೆನಾದರೆ ಅಷ್ಟೇ ಸಾಕು!

ಅವನ ಕಣ್ಣಂಚಿನಲ್ಲಿ ನೀರು ತುಳುಕಿ ಬಂದವು. ಬೋಲಾ ಇನ್ನೊಮ್ಮೆ ಡಂಗುರ ಹೊಡೆದನು. ಬನಶಂಕರಿ ಚವ್ಹಾಳಿಯಿಕ್ಕಿ ನಕ್ಕಾಳು ಓಲೆಕಾರ ಮುಂದಕ್ಕೆ ಹೋದನು. ಹುಡುಗರು ಅವನನ್ನು ಹಿಂಬಾಲಿಸಿದುವು. ಮಕ್ಕಳ ಪ್ರಪಂಚವೇ ಒಂದು ನಿರ್ಮಲ ಜಗತ್ತು !

ಮುದುಕರು ಡಂಗುರದ ಸುದ್ದಿಯನ್ನು ಕೇಳಿ ಪಿಳಿ ಪಿಳಿ ಕಣ್ಣು ಬಿಟ್ಟರು. ತಮ್ಮ ಬಾಳಿನ ಪರ್ಯಂತ ಇಂತ ಸುದ್ದಿಯನ್ನು ಅವರೆಂದಿಗೂ ಕೇಳಿರಲಿಲ್ಲ ಮುಂಬರುವ ವಿಷಮ ಕಾಲವನ್ನು ನೆನೆದುಕೊಂಡು ಅವರು ಮೌನದಿಂದ ಬೋಲಾನ ಕಡೆಗೆ ನೋಡಿದರು ಪಾಪ, ಬೋಲಾ ಏನು ಮಾಡಬಲ್ಲನ ! ಓಲೆಕಾರ ತಲೆಯ ಮೇಲೆ ಅಪ್ಪಣೆಯನ್ನು ಹೊತ್ತುಕೊಂಡು ಸುದ್ದಿಯನ್ನು ಸಾರುತ್ತ ಮುಂದುವರೆಯುತ್ತಲಿದ್ದನು !

ನೆತ್ತರು ಯಾರ ಮೈಯಲ್ಲಿ ಒತ್ತರದಿಂದ ಹರಿಯುತ್ತಲಿತ್ತೋ ಅವರು ಸುಮ್ಮನೆ ಕುಳಿತಿರದಾದರು. ಮೌನದಿಂದ ನೆನೆಯದಾದರು; ಸರಕಾರದ ಹುಕುಮಿಗೆ ಅವರು 'ಚೌಕಶಿ' ಮಾಡಿದರು.

ಕಾಂಗ್ರೆಸ್ಸು ಚಳವಳಿ ಹೂಡಿದುದು ತಪ್ಪೇನು ? ತಮ್ಮ ದೇಶವನ್ನು ಬಿಟ್ಟು ಹೊರಡಿರೆಂದುದು ಅನ್ಯಾಯವೇನು? ಕಾಂಗ್ರೆಸ್ಸಿನ ಚಳವಳಿಗೂ ಕಾಮುದಹನಕ್ಕೂ ಯಾತರ ಸಂಬಂಧ ? ಅವರು ಕೇಳಲಿ ಇಲ್ಲ. ಕಠೋರ ವಾಗಿಯೆ ಚರ್ಚೆ ಮಾಡಿದರು.

'ಓಲೆಕಾರ ಬೋಲಾ ಅವನು ಹೇಗೇ ಇರಲಿ.......'

'ಹೌದೌದು, ನಾವು ಕೇಳಲಾರೆವು....'

'ಅವನು ಸಾಮ್ರಾಜ್ಯಶಾಹಿಯ ಆಳಿಗಡಾಳು....'

'ಅವನು ನೌಕರಶಾಹಿಗೆ ನೆರವಾಗುತ್ತಿದ್ದಾನೆ....'

'ಈಗವನು ಓಲೆಕಾರಿಕೆ ಬಿಟ್ಟುಕೊಡಬೇಕು ಇಲ್ಲವಾದರೆ....'

ಅಲ್ಲೆಲ್ಲೊ ಕಟ್ಟೆಯ ಮೇಲೆ ಕುಳಿತುಕೊಂಡು ಹುಡುಗರು ಕಾವೇರಿದ ಧ್ವನಿಯಿಂದ ಚರ್ಚಿಸುತ್ತಿದ್ದರು. ಎಲ್ಲರೂ ಸಿದ್ದನ ಓರಗೆಯವರೆ. ಆದರೆ ತಾರುಣ್ಯದ ಉತ್ಸಾಹದ ಮುಂದೆ ನ್ಯಾಯ ಅನ್ಯಾಯಗಳ ವಿಚಾರಕ್ಕೆ ಆಸ್ಪದ ವೆಲ್ಲಿಂದ ಬಂದೀತು ! ಬೋಲಾನಿಗೆ ಪ್ರಾಯಶ್ಚಿತ್ತ ಆಗಲೇಬೇಕೆಂದು ಅವರು ಠೀಮಾನಿಸಿದರು !

ಡಂಗುರದ ಕೆಲಸ ಮುಗಿಸಿ ಬೋಲಾ ಮನೆಯ ಕಡೆಗೆ ನಡೆದಿದ್ದನು. ಗೌಡರ ಓಣಿಯಾಚೆಗಿಂದ ಗವ್ಮೆಂಟ್ ಪೆಟ್ಟಿಗೆ ಬಡೆಯುವ ರಾಜಾರಾಣಿ ದೇಖೋನ ಧ್ವನಿಯು ಕೇಳಬಂದಿತು

ಹಾ ಹಾ! ಗವ್ಮೆಂಟ್ ದೇಖೋ! ರಾಜಾ ರಾಣಿ ದೇಖೊ!

'ನನಗೆ ಸಿದ್ದನನ್ನು ಕಾಣುವ ಆಸೆಯಾಗುತ್ತಿದೆ. ಯಾಕೋ ಅವ ನನ್ನು ನೋಡಬೇಕೆನ್ನಿಸುತ್ತಿದೆ' ಬೋಲಾ ತನ್ನ ಹೆಂಡತಿಯ ಕಡೆಗೆ ನೋಡುತ್ತ ಅಂದನು. ಆಕೆ ರೊಟ್ಟಿಯನ್ನು ಬಡಿಯುತ್ತಲಿದ್ದಳು. ಅವನು ಇದಿರಿನಲ್ಲಿ ಮಣೆಯ ಮೇಲೆ ಕುಳಿತುಕೊಂಡು ಬೇಯುವ ರೊಟ್ಟಿಯನ್ನು ಒಮ್ಮೆ ನೋಡುತ್ತ, ಇನ್ನೊಮ್ಮೆ ಹೆಂಡತಿಯ ಕಡೆಗೆ ನೋಡುತ್ತ ಶೂನ್ಯ ಹೃದಯನಾಗಿ ಕುಳಿತಿದ್ದನು.

ಅಷ್ಟರಲ್ಲಿ ಗೌಡರಿಂದ ಕರೆಬಂದಿತು. ಗುಪ್ತ ಕಾಗದ ಪತ್ರಗಳಿವೆ. ಕಛೇರಿಗೊಯ್ಯುವ ತುಂಬಬೇಕಾದ ಹಣವಿದೆ. ಬೋಲಾ ತಾಲೂಕಿಗೆ ಒಯ್ದು ಮುಟ್ಟಿಸಿ ಬರಬೇಕು!

'ಬೋಲಾ, ಜೋಕೆಯಿಂದ ಕಛೇರಿಗೆ ಒಯ್ದು ಮುಟ್ಟಿಸಿ ಬರಬೇಕು. ಇದರ ಹೊಣೆಯೆಲ್ಲ ನಿನ್ನ ಮೇಲೆಯೆ' ಎಂದೆನ್ನುತ್ತ ಗೌಡರು ಓಲೆಕಾರನ ಕೈಗೆ ಸಣ್ಣ ಗಂಟೊಂದನ್ನು ಕೊಟ್ಟರು. ಬೋಲಾ ಅದನ್ನು ತನ್ನ ರುಮ್ಮಾಲಿನ ಚುಂಗಿನಲ್ಲಿ ಕಟ್ಟಿ ತಲೆಯ ಮೇಲಿಟ್ಟುಕೊಂಡು ಕೈಯಲ್ಲಿ ಓಲೆಕಾರಿಕೆಯ ದಂಡ ಹತಾರಗಳನ್ನು ಹಿಡಿದುಕೊಂಡು ಗೌಡರ ಮನೆಯ ಕಟ್ಟಿಯಿಂದ ಇಳಿದು ಮುಂದಕ್ಕೆ ಸಾಗಿದನು.

ಮುದ್ದಪ್ಪನವರ ಮನೆಯ ಹತ್ತಿರ ಬರುತ್ತಿರುವಂತೆಯೆ ಅವನನ್ನು ಕಾಮನ ಪಬ್ಬದ ಹುಡುಗರ ತಂಡವೊಂದು ಬೊಬ್ಬೆಯಿಡುತ್ತಲೆ ಸ್ವಾಗತಿಸಿತು. ಕಾಮದಹನದ ಕುಳ್ಳಿಗೆಂದು ಹುಡುಗರು ಕಾಯ್ದು ನಿಂತ ಸನ್ನಿವೇಶವನ್ನು ಬೋಲಾ ನಗುತ್ತ ಇದಿರುಗೊಂಡನು. ಪ್ರತಿಯಾಗಿ ಅವರು ಬಾಯಿಗೆ ಕೈ ಹಚ್ಚಿ ಹೊಯ್ಕೊಂಡರು. ಆ ದಂಡು ದಾಟಿ ಬೋಲಾ ಮುಂದೆ ನಡೆದನು.

ಹೋಳಿ ಹುಣ್ಣಿವೆಯ ಬಿಸಿಲು ರಣಗುಡುತ್ತಿತ್ತು. ಹೊಲದ ಕಡಲೆಯ ಬೆಳೆಯು ತಲೆಯೊಡೆದುಕೊಂಡು ನಿಂತಿತ್ತು. ಜೀರಂಗಿಗಳು ಜಿರ್

ಎನ್ನುತ್ತಿದ್ದವು. ಎರಳೆಗಳು ಅಲ್ಲಲ್ಲಿ ಮಾಮರದಡಿಯಲ್ಲಿ ನಿಂತಿದ್ದವು. ಅದನ್ನೆಲ್ಲ ನೋಡುತ್ತ ನಡೆದಿದ್ದ ಬೋಲಾನ ಮನಸ್ಸು ಇದ್ದಕ್ಕಿದ್ದಂತೆ ಕಳಸದಲ್ಲಿ ಓದುತ್ತಿದ್ದ ಮಗನ ಕಡೆಗೆ ಓಡಿತು.

'ಮಗೂ, ನೀನು ಮಾಸ್ತರನಾಗಬೇಕು' ಎಂದಿತು ಬೋಲಾನ ಮನಸ್ಸು.

ಕಳಸದ ಶಾಲೆಯಲ್ಲಿ ಸಿದ್ದನು ಕಾಂಗ್ರೆಸಿನ ಕರಪತ್ರವೊಂದನ್ನು ಪಾಟಿಯ ಅಡಿಯಲ್ಲಿರಿಸಿಕೊಂಡು ಓದುತ್ತಿದ್ದನು. ಮಾಸ್ತರರು ಗಣಿತದ ಪಾಠ ಕೊಟ್ಟು ಇನ್ನಾವುದೊ ಕಾರ್ಯದಲ್ಲಿ ತೊಡಗಿದ್ದರು. ಸಿದ್ದನು ಕರಪತ್ರ ಓದುವದರಲ್ಲಿಯೆ ಲೀನವಾಗಿದ್ದನು: ಗೌಡರು ದಪ್ತರು ಸುಡಲಿ. ಓಲೆಕಾರನು ಹತಾರ ಒಪ್ಪಿಸಿ ಕಂದಾಯದ ಹಣವನ್ನು ಅರ್ಪಿಸಲಿ. ನೌಕರರು ಸಂಪು ಹೂಡಲಿ. ಇದ್ದಕ್ಕಿದ್ದಂತೆ ಸರಕಾರ ಕುಪ್ಪಳಿಸಿ ಹೋಗುತ್ತದೆ. ಈಗಾಗಲೆ ಲಕ್ಷಾಂತರ ಹಳ್ಳಿಗಳು ಸ್ವಾತಂತ್ರ್ಯ ಸಾರಿವೆ. ಗೌಡರೆ ಓಲೆಯಕಾರರೆ, ನೀವೇ ಹಿಂದೂದೇಶದ ಸ್ವಾತಂತ್ರ್ಯದ ಹರಿಕಾರರು. ನೀವೀಗ ಮನಸ್ಸು ಮಾಡಬೇಕು. ದೇಶಕ್ಕಾಗಿ ನೀವೀಗ ಮಾಡಬೇಕು, ಇಲ್ಲವೆ ಮಡಿಯಬೇಕು.

'ಅಪ್ಪಾ, ನೀನೀಗ ಓಲೆಕಾರಿಕೆಗೆ ತಿಲಾಂಜಲಿ ಕೊಡಬೇಕಲ್ಲ....'

'ಮಗೂ, ನೀನು ಮಾಸ್ತರನಾಗಿ ಬಾ'

ಅದೇ ಒಂದು ವಿಚಾರದಲ್ಲಿ ಓಲೆಕಾರ ಬೋಲಾ ದಾರಿಯನ್ನು ನಡೆದು ಸಂತೆಯ ಮರದಡಿಯಲ್ಲಿ ಬಂದನು. ಗಾಳಿ ಸುಯ್ಯೆಂದು ಬೀಸಿತು. ಕೋಗಿಲವೊಂದು ಕುಕಿಲಿತು. ಬೋಲಾ ದಣಿದ ಮನಸ್ಸಿನ ಉಸಿರು ಹಾಕಿ ಗಿಡದ ಬಳಿಯಲ್ಲಿ ತಂಗಿದನು. ಹೊತ್ತು ಬಹಳ ಬೇಕಾಗಿರಲಿಲ್ಲ ಅವನ ದಣಿದ ಮನಸ್ಸಿಗೆ. ಜೊಂಪು ಜಾರಿ ಬಂದಿತು.

ಅದೇ ದಾರಿಯಿಂದ ಹೋಗುತ್ತಲಿದ್ದ ಅಂಚೆಯ ಜವಾನನೊಬ್ಬನು ಅಲ್ಲಿಯೇ ಬಂದು ತಂಗುವ ಹೊತ್ತಿಗೆ ಬೋಲಾನಿಗೆ ಎಚ್ಚರವಾಯಿತು. ಎದ್ದು ನೋಡುತ್ತಾನೆ! ಕಾಗದ ಪತ್ರಗಳಿಲ್ಲ, ಓಲೆಕಾರಿಕೆಯ ದಂಡವಿಲ್ಲ! ಬದಲಾಗಿ ಕಾಂಗ್ರೆಸಿನ ಕರಪತ್ರಗಳಿವೆ. ಬೋಲಾನ ಮೇಲೆ ಸಿಡಿಲು ಬಿದ್ದಂತಾಯಿತು !

'ನಿನ್ನ ಹೆಸರೇನು ?' ಅಂಚೆಯವನು ಕೇಳಿದನು.

'ಬೋಲಾ'

'ಹಿರೇಮಲ್ಲೂರಿನವನೇನು'

'ಹೌದು'

'ನಿನಗೊಂದು ಕಾಗದವಿದೆ'

ಓದು ಬರದ ಬೋಲಾ ಅಂಚೆಯವನಿತ್ತ ಕಾಗದವನ್ನು ತೆಗೆದು ಕೊಂಡು ಹುಚ್ಚನಂತೆ ಕಛೇರಿಯ ಕಡೆಗೆ ನಡೆದನು. ಕಾಗದವು ಕಳಸದಲ್ಲಿದ್ದ ಮಗನಿಂದ ಬಂದಿದ್ದಿತು. ದೇಶದ ಹಿತಚಿಂತನೆಯ ದೃಷ್ಟಿಯಿಂದ ಓಲೆಕಾರಿಕೆ ಯನ್ನು ಬಿಟ್ಟುಕೊಡಬೇಕೆಂಬಾಶಯವನ್ನು ಕಾಂಗ್ರೆಸಿನ ಕರಪತ್ರಗಳನ್ನು ಓದಿ ಸ್ಫೂರ್ತಿಗೊಂಡಿದ್ದ ಮಗನು ಅದರಲ್ಲಿ ಕಾಣಿಸಿದ್ದನು. ಬೋಲಾನಿಗೆ ಓದುವುದಕ್ಕೆ ಬರುತ್ತಿರಲಿಲ್ಲ. ಮೊದಲು ಕಛೇರಿಗೆ ಹೋಗಿ ಕಳವಿನ ಸುದ್ದಿ ಯನ್ನು ಸರಕಾರಕ್ಕೆ ಮುಟ್ಟಿಸಿ ನಂತರ ಯಾರಿಂದಲಾದರೂ ಓದಿಸಿದರೆ ಆದೀತೆಂದು ಅವನು ಶಿಗ್ಗಾವಿಯ ಕಡೆಗೆ ತೆರಳಿದನು.

ಹುಚ್ಚ ಬೋಲಾ! ನಿಜಸಂಗತಿಯನ್ನು ಹೇಳಲು ಹೋಗಿ ಸಿಕ್ಕು ಬಿದ್ದನು. ಮಗನ ಕಾಗದವೂ ಬೋಲಾನ ಮೂರ್ಖತನಕ್ಕೆ ಸಾಕ್ಷಿ ಹೇಳುತ್ತ ಲಿದ್ದಿತು. ಸರಕಾರದವರ ಚೌಕಶಿಯಲ್ಲಿ ಸಿಕ್ಕ ಬೋಲಾ ಪಟ್ಟಯಾತನೆ ಯನ್ನು ನಾವು ಹೇಳಬಾರದು. ನೋವ ಬಣ್ಣಿಸುವ ಶಕ್ತಿ ಮಾತಿಗೆಲ್ಲಿಂದ ಬಂದೀತು ? ದೈವವೊಡ್ಡಿದ ದೋಷವನ್ನು ದೈವವೇ ತಿದ್ದಬಲ್ಲುದು !

* * *

ಶಿಗ್ಗಾವಿಯ ಕಚೇರಿಯಲ್ಲಿ ನಿಂಗಪ್ಪ ಮಾಸ್ತರರನ್ನು ದಂಡಿಸಿದ ಫೌಜ ದಾರ ಸಾಹೇಬರ ಸಮಕ್ಷಮದಲ್ಲಿ ಬೋಲಾನ ನ್ಯಾಯ ವಿಚಾರಣೆ ನಡೆ ದಿದ್ದಿತು. ಬೋಲಾ ಕೈಮುಗಿದುಕೊಂಡು ತೋಸಿಕೊಂಡು ತೆಪ್ಪಗಾದ ಗುಬ್ಬಿಯ ಮರಿಯಂತೆ ಫೌಜದಾರರ ಇದಿರು ನಿಂತುಕೊಂಡಿದ್ದನು. ಅವನ ಎಡಬಲದಲ್ಲಿ ಪೋಲೀಸರು ಹುಜೂರಿನ ಆಜ್ಞೆಗಾಗಿ ನಿಂತುಕೊಂಡಿದ್ದರು.

'ಬೋಲಾ....' ಫೌಜದಾರರು ಓಲೆಕಾರನ ಕಡೆಗೆ ನೋಡುತ್ತ ಗದರಿಸಿದರು.

'ದೇವರೂ....' ಓಲೆಕಾರನು ತಲೆ ತಗ್ಗಿಸಿ ನುಡಿದನು.

'ದೇವರಂತೆ ಮಗ ದೇವರು. ಕಾಗದ ಪತ್ರಗಳನ್ನೂ, ಹಣವನ್ನೂ ಕಾಂಗ್ರೆಸಿನವರಿಗೆ ನೀನು ಕೊಟ್ಟಿದ್ದು ಸುಳ್ಳೋ'

'ಪಾದ ಮುಟ್ಟಿ ಹೇಳುತ್ತೇನೆ ನಮ್ಮಪ್ಪ....'

'ಪಾದ ಗೀದ ಅದೆಲ್ಲ ಇರಲಿ' ಕೊಟ್ಟಿದ್ದೊ ಸುಳ್ಳೊ ಅಲ್ಲೊ ಎರಡೆ ಹೇಳು....'

'ಕೊಟ್ಟಿಲ್ಲ ತಂದೆ...'

'ಕೊಟ್ಟಿಲ್ಲಾ?....'

ಹೀಗೆಂದೆನ್ನುತ್ತ ಫೌಜದಾರರು ಹತ್ತಿರದ ಪೋಲೀಸರ ಕಡೆಗೆ ನೋಡಿದರು. ಪೋಲೀಸನೊಬ್ಬನು ಓಲೆಕಾರನ ಕುತ್ತಿಗೆ ಹಿಡಿದನು. ಇನ್ನೊಬ್ಬನು ಹತ್ತಿಕ್ಕಿ ಅವನನ್ನು ಬಾಗಿಸಿದನು. ಫೌಜದಾರರು ಬೆನ್ನಮೇಲೆ ಮೊಳಕೈಯಿಂದ ಮೂರುಬಾರಿ ಗುದ್ದಿದರು. ಬೋಲಾ ನಿಶ್ಚೇಷ್ಟಿತನಾಗಿ ನೆಲಕ್ಕುರುಳಿದನು.

ಸರಕಾರದ ಆಜ್ಞೆಯನ್ನು ಡಂಗುರದ ಮೂಲಕ ಸಾರಿ ಹೇಳಿದುದೇ ಓಲೆಕಾರನಿಗೆ ಪ್ರಾಯಶ್ಚಿತ್ತವಾಯಿತು. ಹಿರೇಮಲ್ಲೂರಿನಲ್ಲಿ ಬಿಸಿನೆತ್ತರದ ಕೆಲವು ಹುಡುಗರು ಹೂಡಿದ ಸಂಚು ಓಲೆಕಾರ ಬೋಲಾನ ಮುಗ್ಧ ಹೃದಯದ ಮೇಲೆ ಬರೆ ಕೊಡಿಸುವಂತಾಯಿತು. ಬೋಲಾನ ಹತ್ತಿರ ನೇರವಾಗಿ ಬಂದು ಓಲೆಕಾರಿಕೆಯನ್ನು ನೀನೀಗ ದೇಶದ ಹಿತಚಿಂತನೆಯ ದೃಷ್ಟಿಯಿಂದ ಬಿಟ್ಟುಬಿಡಬೇಕೆಂದು ಅವರು ಕೇಳಿಕೊಂಡಿದ್ದರೆ ಖಂಡಿತ ಅವನು ಬಿಟ್ಟುಬಿಡಬಹುದಾಗಿದ್ದಿತು. ಆದರೆ ಹಾಗೆ ಮಾಡದೆ ಸರಕಾರಕ್ಕೆ ಓಲೆಕಾರನು ಒಯ್ಯುತ್ತಲಿದ್ದ ಕಾಗದ ಪತ್ರಗಳನ್ನೂ ಹಣವನ್ನು ಈಗ ಅವರು ದೋಚಿಕೊಂಡು ಹೋದುದರಿಂದ ಓಲೆಕಾರಿಕೆಯನ್ನು ಮಾತ್ರವೇ ಅಲ್ಲ, ಅದರೊಂದಿಗೆ ತನ್ನ ಜೀವವನ್ನೂ ಅವನು....

ಅಗೋ, ಬೋಲಾ ಬೇಡಿಕೊಳ್ಳುತ್ತಲಿದ್ದಾನೆ. 'ಎಪ್ಪಾ, ಸಾಯುತ್ತಿದ್ದೇನೆ. ನನ್ನ ಓಲೆಕಾರಿಕೆಯನ್ನು ಕಸಿದುಕೊಂಡು ಜೀವಂತ ಬಿಟ್ಟುಬಿಡಿರಿ....'

'ರಾಜೀನಾಮೆ ಕೊಡುತ್ತೀ ?....' ಫೌಜದಾರರು ಮುಂಗಾರಿಯ ಮೊಳಗಿನಂತೆ ಅಬ್ಬರಿಸುತ್ತ ಬೋಲಾನನ್ನು ಇನ್ನೂ ಒಮ್ಮೆ ಜಡಿದರು. ಮಗನು ಬರೆದ ಪತ್ರ ಸುಳ್ಳೇ ? ದೇಶಕ್ಕಾಗಿ ರಾಜೀನಾಮೆ ಕೊಡಬೇಕಂತೆ ! ಪೋಲೀಸ್, ಏನು ನೋಡುತ್ತೀರಿ ? ಖೈದಿಗಳ ಖೋಲಿಯಲ್ಲಿ ಮಲ್ಲೂರಿನ ಓಲೆಕಾರನನ್ನು ದೂಡಿರಿ.

ಹುಜೂರಿನ ಅಪ್ಪಣೆಯಂತೆ ಪೋಲೀಸರು ಬೋಲಾನನ್ನು ಖೈದಿಗಳ ಖೋಲಿಯಲ್ಲಿ ಒಯ್ದಿರಿಸಿ ಬಂದು ಸಾಹೇಬರ ಕಿವಿಯಲ್ಲಿ ಏನನೋ ಸುದ್ದೀ ಹೇಳಿದರು. ಏನಂತ? ಬೋಲಾನ ಜೀವಕ್ಕೆ ಅಪಾಯವಿದೆ! ಸಂಜೆಯ ಒಳಗಾಗಿ ಅವನನ್ನು ಬಿಟ್ಟುಬಿಡುವುದೇ ಒಳ್ಳೆಯದು!

ತಾಲೂಕಿನ ಸೆರೆಮನೆಯಲ್ಲಿ ಬೋಲಾ ನರಳುತ್ತಲಿದ್ದನು. ಸಿದ್ದಾ, ನಿನ್ನನ್ನು ನೋಡಬೇಕಲ್ಲೋ....! ಮಗನ ಮುಖವನ್ನು ನೋಡಲೆಳಸಿದ ತಂದೆಯ ಜೀವವಿಂತು ಕನವರಿಸುತ್ತಲಿದ್ದಿತು.

ಅದೇನೊ ಕರಳಿನ ಸಂಬಂಧವೆನ್ನುತ್ತಾರಲ್ಲ! ಕಳಸದಲ್ಲಿ ನಾಲೆ ಬಿಟ್ಟ ಮೇಲೆ ಮಲ್ಲೂರಿನ ಐದಾರು ಹುಡುಗರು ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತುಕೊಂಡು ರೊಟ್ಟೆಯನ್ನು ತಿನ್ನುತ್ತಲಿದ್ದರು. ಸಿದ್ದನಿಗೆ ನಡುವೆ ಬಿಕ್ಕು ಬಂದಿತು. ಬಿಕ್ಕಿನೊಂದಿಗೆ ಎಡದ ಕಣ್ಣು ಕುಣಿಯಿತು. ಸಿದ್ದನು 'ಯಾರಿಗೊ ನೆಟ್ಟಗಿಲ್ಲ; ನನ್ನನ್ನು ಯಾರು ನೆನಸುತ್ತಿದ್ದಾರೆ' ಎಂದು ತನ್ನ ಓರಿಗೆಯವರಿಗೆ ಕೇಳಿದನು. 'ನಿಮ್ಮಪ್ಪ ನೆನಸುತ್ತಿರಬೇಕೊ ಸಿದ್ದ! ಊರಿಗೆ ಹೋಗಿ ಬಾ' ಎಂದು ಅವನ ಗೆಳೆಯರು ಚೇಷ್ಟೆಯಾಡಿದರು. ಸಿದ್ದನಿಗೆ ರೊಟ್ಟೆಯನ್ನು ತಿಂದುದೇ ಗುರುತಾಗಲಿಲ್ಲ. ಎಂತದೋ ವಿಚಿತ್ರ ಪ್ರಸಂಗ ಅವನ ಮನಸ್ಸಿನ ತುಂಬೆಲ್ಲ ಸುಳಿದು ಶಾಂತಿಯನ್ನು ಕಲಕು ಮಲಕು ಮಾಡಿತು. ಅವನಿಗೆ ಊರ ಕಡೆ ನೆನಪಾಯಿತು. ತಂದೆಯನ್ನೊಮ್ಮೆ ಕಂಡುಬರಬೇಕೆಂದೆನ್ನಿಸಿತು. ತಾನು ಬರೆದ ಪತ್ರವನ್ನು ಕಂಡು ಅವನು ಏನೆಂದು ಭಾವಿಸಿಕೊಂಡನೊ! ಈ ಮುಪ್ಪಿನ ಕಾಲದಲ್ಲಿ ಅವನು ತನಗಾಗಿ ಎಷ್ಟು ಕಷ್ಟಪಡಬೇಕಾಗಿ ಬಂದಿತೋ ಎಂದು ಮುಂತಾಗಿ ನೆನೆದು ಮರುಗಿದನು.

ಸಿದ್ದನ ಸಹಪಾಠಿಗಳು ಓದುತ್ತಿದ್ದರು. ತನ್ನ ಪಾಟಿ ಪುಸ್ತಕಗಳನ್ನು ಕಟ್ಟಿ ಅಲ್ಲಿ ಮೂಲೆಯಲ್ಲಿಟ್ಟು ಮಾಸ್ತರರ ಕಡೆಗೆ ಸಿದ್ದ ಹೊರಟನು. ಮಾಸ್ತರರು ವರ್ತಮಾನ ಪತ್ರಿಕೆಯನ್ನು ಓದುತ್ತಲಿದ್ದರು. ದೇಶದಲ್ಲಿಯ ಅಸಹಕಾರ ಚಳವಳಿಯು ಪ್ರಜ್ವಲಿಸಿದ ಕತೆಯನ್ನು ಓದುವದರಲ್ಲಿ ಅವರು ಮಗ್ನರಾಗಿ ಹೋಗಿದ್ದರು. ಸಿದ್ದನು ಅವರ ಹತ್ತಿರ ಬಂದು ಸಣ್ಣ ಮುಖ ಮಾಡಿಕೊಂಡ. ನಿಂತು ಬಹಳ ಹೊತ್ತಾಯಿತು. ಮಾಸ್ತರರಿಗೆ ಅವನು ಬಂದುದೇ ಕಾಣಲಿಲ್ಲ. ಸಿದ್ದನೂ ಅವರನ್ನು ಮಾತನಾಡಿಸಲಿಲ್ಲ. ಕೊನೆಗೆ

ಮಾಸ್ತರರೇ ಓದುವುದನ್ನು ಮುಗಿಸಿ ಅತ್ತ ಕಡೆಗೆ ನೋಡಿದಾಗ ಅವರಿಗೆ ಆಶ್ಚರ್ಯವಾಯಿತು. ಸಿದ್ದನು ಸಣ್ಣ ಮುಖಮಾಡಿಕೊಂಡು ನಿಂತಿದ್ದಾನೆ!

'ಏಕೆ ಬಂದೆ ಸಿದ್ದ' ಎಂದು ಮಾಸ್ತರರು ವಿಶ್ವಾಸದ ಮಾತಿನಿಂದ ಓಲೆಕಾರನ ಮಗನನ್ನು ಪ್ರಶ್ನಿಸಿದರು: ಸಿದ್ದನು ಸುಮ್ಮನೇ ಇದ್ದನು. ಮಾಸ್ತರರೇ ಉತ್ತರ ಹೇಳಿದರು. 'ಊರಿಗೆ ಹೋಗಬೇಕೆಂದಿದ್ದೀಯ' ಎಂದರು. 'ಹೌದರಿ ಅಪ್ಪನನ್ನು ಕಾಣಬೇಕೆಂದೆನ್ನಿಸುತ್ತಿದೆ. ಹೋಗಿ ಬರುತ್ತೇನೆ. ಎರಡು ದಿನದ ಮಟ್ಟಿಗೆ ಅಪ್ಪಣೆ ಕೊಡಿರಿ' ಎಂದು ಸಿದ್ದ ಹೇಳಿದುದಕ್ಕೆ ಮಾಸ್ತರರು 'ಛೀ' ಎಂದರು. 'ಯಾಕೆ ಮನೆಯ ಬಗ್ಗೆ ಹಳಹಳಿ ಸಿದ್ದ? ಮೊನ್ನೆ ಮೊನ್ನೆ ಹೋಗಿ ಬಂದಿದ್ದೀ. ಪರೀಕ್ಷೆ ಸಮೀಪಿಸುತ್ತಿದೆಯಲ್ಲ' ಎಂದರು. ಅವರು ಅಂದುದೇ ನಿಜವಿತ್ತು. ಓಲೆಕಾರನ ಮಗನ ಪರೀಕ್ಷೆಯ ಕಾಲ ನಿಜವಾಗಿಯೂ ಸಮೀಪಿಸುತ್ತಿದ್ದಿತು.

ಊರಿಗೆ ಹೋಗುವುದನ್ನು ಮುಂದಕ್ಕೆ ತಳ್ಳಲು ಮಾಸ್ತರರು ಸಿದ್ದನಿಗೆ ಹೇಳಿದರೇನೋ ನಿಜ. ಸಿದ್ದನು ಹಿರಿಯರ ಮಾತಿಗೆ ಹೂಂ ಎಂದು ಹೇಳಿ ಬಂದನೇನೊ ನಿಜ. ಆದರೆ ಮರುದಿನದ ಮುಂಜಾವಿನಲ್ಲಿ ಅವನಿಗೇನು ತಿಳಿಯಿತೊ ಏನೊ ಇದ್ದಕ್ಕಿದ್ದಂತೆಯೆ ಅವನು ಊರಿಗೆ ಹೊರಟು ನಿಂತನು. ಯಾರಿಗೂ ಹೇಳದಂತೆ ಹೊರಟನು.

ತಾಲೂಕಿನ ಸೆರೆಮನೆಯಿಂದ ರಾತ್ರಿಯೇ ಬೋಲಾನನ್ನು ಯಾರಿಗೂ ಗುರುತಾಗದಂತೆ ಹೇರಿಕೊಂಡು ಒಂದಿದ್ದರು. ಬೆಳಗಿನ ಜಾವದಲ್ಲಿ ಊರಲ್ಲೆಲ್ಲ ಸುದ್ದಿ ಹಬ್ಬಿಹರಿದಿದ್ದಿತು. ಬೋಲಾನಿಗೆ ಯಾವುದೋ ಬೇನೆಯಂತೆ! ಬಾಯಿಂದ ರಕ್ತವೇ ಬೀಳುತ್ತಿದೆ!

'ಸಿದ್ದ ಬಂದನೇ ಸಿದ್ದ' ರಕ್ತವನ್ನು ಗುಳುತ್ತಲೇ ಮಹಾ ಪ್ರಯಾಸದಿಂದ ಬೋಲಾ ಹೆಂಡತಿಗೆ ಮೇಲಿಂದ ಮೇಲೆ ಕೇಳುತ್ತಲಿದ್ದನು.

'ಬರುತಾನೆ. ಕರೆಯಲಿಕ್ಕೆ ಕಳಿಸಿದ್ದೇವೆ' ಎಂದು ಹತ್ತಿರದಲ್ಲಿದ್ದ ಯಾರೋ ಅವನಿಗೆ ಹೇಳುವರು. ಬೋಲಾನ ಹೆಂಡತಿಗೆ ಮಾತನಾಡುವುದಕ್ಕೆ ಬಾಯಿಯೇ ಇರಲಿಲ್ಲ. ಸಂಕಟದ ಸಮಯದಲ್ಲಿ ಮನುಷ್ಯ ಮೂಕನಾಗುತ್ತಾನೆಂದು ತೋರುತ್ತದೆ!

'ಸಿದ್ದಾ' ಎಂದು ಬೋಲಾ ಕೂಗಿದರೆ ಹೆಂಡತಿ ಕಣ್ಣಿನಲ್ಲಿ ನೀರು ತುಂಬಿಕೊಂಡು 'ಬರುತ್ತಾನೆ' ಎಂಬರ್ಥವನ್ನು ಕೈಸನ್ನೆ ಮಾಡಿ ಹೇಳುತ್ತಿದ್ದಳು.

ಶಿಶುವಿನಹಾಳದವರೆಗೆ ಸಿದ್ದನು ತ್ವರಿತಗತಿಯಿಂದ ಬಂದನು. ಅಲ್ಲಿ ಕವಲುದಾರಿ. ಆ ದಾರಿಯನ್ನು ಬಿಟ್ಟು ಅಡ್ಡದಾರಿಯೊಂದನ್ನು ಹಿಡಿದು ಓಡತೊಡಗಿದನು. ಅಲ್ಲಿಯೇ ಅವನ ತಂದೆಯ ಕರೆಯು ಮುಟ್ಟಬೇಕಿದ್ದಿತು. ಆದರೆ ಕವಲುದಾರಿ ಮೋಸ ಮಾಡಿತು.

ಆದರೂ ಸಿದ್ದನ ಹೃದಯ ಅವನಿಗೆ ಏನೋ ಸುದ್ದಿಯನ್ನು ಸಾರುತ್ತಿದ್ದಿತು. ಸಿದ್ದ ಓಡತೊಡಗಿದ. ಒಳಗಿನ ಕರುಳಿನ ಜಾಗುಟೆ ಅವಸರದಿಂದ ಬಾರಿಸತೊಡಗಿತು. ಓಡುತಿರುವ ಸಿದ್ದ ಕಲ್ಲನೆಡವಿ ಬಿದ್ದನು. ಹಿಂದಿನಿಂದ ಯಾರೋ ಕೂಗಿದಂತಾಯಿತು. ಸಿದ್ದಾ, ಓಡು. ನಿಮ್ಮಪ್ಪ ನಿನಗಾಗಿ ದಾರೀ ಕಾಯುತ್ತಿದ್ದಾನೆ. ತಡಮಾಡಿದರೆ ಗಾಡಿ ತಪ್ಪುತ್ತದೆ. ಬೇಗ ಓಡು.

ಊರ ಅಗಸೆಯನ್ನು ಓಲೆಕಾರನ ಮಗನು ಸೇರುತ್ತಿದ್ದನು. 'ಸಣ್ಣ ಮಗು. ಕಳ್ಳು. ಸುದ್ದಿ ಮುಟ್ಟುವುದಕ್ಕೆ ಮೊದಲೇ ಬಂದಿತು.' ಎಂದು ಮುಂತಾಗಿ ಸಿದ್ದನನ್ನು ನೋಡಿದವರು ಮಾತನಾಡಿಕೊಳ್ಳುತ್ತಿದ್ದರು.

ಮನೆಯ ಹೊಸ್ತಿಲನ್ನು ಮುಟ್ಟಿ ಸಿದ್ದನು 'ಅಪ್ಪಾ' ಎನ್ನುವ ಹೊತ್ತಿಗೆ ಓಲೆಕಾರನು ಹೆಂಡತಿಗೆ ಸಂದೇಶ ಹೇಳಿ ಹೊರಟು ಹೋಗಿದ್ದನು. ಮಗನು ಬಂದರೆ ಹೇಳು. 'ನಾನು ಕೊನೆಯವರೆಗೂ ದಾರಿ ನೋಡಿದೆನೆಂದು ತಿಳಿಸು. ಶಿವಗೆ ಮನಸ್ಸು ಬಂದಂತೆ ತೋರಲಿಲ್ಲ. ಅವನು ಓದಲಿ, ಮಾಸ್ತರನಾಗಲಿ, ಓಲೆಕಾರನಾಗುವುದು ಬೇಡ. ಮಾಸ್ತರರ ಉಡಿಯಲ್ಲಿ ಬಿದ್ದು ಅವನು ದೊಡ್ಡವನಾಗಲಿ' ಇಂತ ಸಂದೇಶವನ್ನು ಕೈಸನ್ನೆಯಿಂದ ಹೆಂಡತಿಗೆ ಹೇಳಿ ಬೋಲಾ ಹೊರಟು ಹೋಗಿದ್ದನು.

ದೂರದ ಕಳಸಕ್ಕೆ ಸುದ್ದಿ ಹೋಗಿ ಮುಟ್ಟಿದಾಗ 'ನಿನ್ನ ಮಗ ನಿನ್ನಂತೆ ಓಲೆಕಾರನಾಗುವುದು ಬೇಡ. ಈ ಓಲೆಕಾರಿಕೆ ನಿನ್ನೊಂದಿಗೇ ಮುಗಿಯಲಿ ಎಂದು ನಾನು ಹೇಳಿ ಬಂದುದೇ ತಪ್ಪಾಯಿತೇ' ಎಂದೆನ್ನುತ್ತ ಮಾಸ್ತರರು ತಮ್ಮ ಕಣ್ಣನ್ನು ತೀಡಿಕೊಳ್ಳುತ್ತಿದ್ದರು.

# ಗುಳ್ಳೇಕಾರ ಸತ್ಯಪ್ಪ!

ಈ ರೂಲನ್ನು ನೋಡಿದ ಕೂಡಲೆ ನನಗೆ ಗುಳ್ಳೇಕಾರ ಸತ್ಯಪ್ಪನ ನೆನಪೇ ಬರುತ್ತದೆ. ಇಂದಿಗೆ ಮೂರುವರೆ ವರುಷಗಳು ಸಂದುವು. ಇದುವರೆಗೂ ಯಾರೂ ಈ ರೂಲು ಹೂಡಿ ಹಂತಿ ಕಟ್ಟಿಲ್ಲ. ಎಂತಹ ಎತ್ತುಗಳು ಬೇಕೆಂದರೂ ಕೊಡಬಹುದು. ಎಡಬಲಕ್ಕೆ ನಾಲ್ಕೈದು ಆಳುಗಳನ್ನು ಕೊಡಬಹುದು. ಆದರೆ ಎತ್ತು ಹೂಡಿ ರೂಲಿನ ಮೇಲೆ ನಿಂತುಕೊಂಡು ಹಾಡುತ್ತ ಹಂತಿ ತಿರುಗಿಸುವ ಸಾಮರ್ಥ್ಯ- ಅದಕ್ಕೂ ಶಿವನ ಪುಣ್ಯಬೇಕು, ಭೂದೇವಿಯ ಹರಕೆ ಬೇಕು.

ನಮ್ಮ ಗುಳ್ಳೇಕಾರ ಸತ್ಯಪ್ಪನಿಗಿತ್ತು ಆ ಸನ್ಮಾನ. ಗೌಡರ ಎರಡು ಎತ್ತು, ಕೈಯಲ್ಲೊಂದು ಹುಲಗೂರು ಬಾರಕೋಲು, ಶಿವಾ ಎಂದು ಸತ್ಯಪ್ಪ ಎತ್ತು ಹೂಡಿ ರೂಲು ಏರಿದನೆಂದರೆ ಆ ಚಿತ್ರ ನೋಡಬೇಕು. ಸತ್ಯವನ್ನು ಕಲ್ಲಿನಲ್ಲಿ ಕಂಡರಿಸುವ ಶಿಲ್ಪಿ ಎಲ್ಲೋ! ಕರ್ಮಯೋಗಿಯನ್ನು ಕಂಡು ಕನವರಿಸುವ ಕವಿ ಎಲ್ಲೋ! ತಪಸಿಯನ್ನು ಕಂಡು ಕೃಪೆದೋರಲೆಳಸುವ ಶಿವನೆಲ್ಲೊ ನಮ್ಮ ಸತ್ಯಪ್ಪನೆ ಸತ್ಯಪ್ಪ! ತಲೆಯ ಮೇಲೊಂದು ಹರಕು ರುಮ್ಮಾಲು. ಬರೀ ನೆತ್ತಿಯಿಂದ ರೂಲನ್ನೇರಬಾರದು. ಅದು ಮಂಗಳವಲ್ಲ, ಸೃಷ್ಟಿದೇವಿಗೆ ತೋರುವ ವಿನಯವಲ್ಲ. ಏನಾದರೂ ತಲೆಯ ಮೇಲಿರಬೇಕು. ಕಿವಿಯಲ್ಲಿ ತೊಗರಿಯ ಸಪ್ಪೋ, ಯಾವುದೋ ಕಾಡ ಹುವ್ವೋ ಇರಬೇಕು. ಭೂಮಿದೇವಿ ಕಾಳನ್ನೊಕ್ಕುವಂದು ಒಂದು ನೋಡುತ್ತಾಳೆ. ಈತ ನನ್ನ ಮಗ ಹೌದೋ, ಅಲ್ಲವೋ ಎಂದು ಕಿವಿಯನ್ನು ನೋಡುತ್ತಾಳೆ. ಅಲ್ಲೊಂದು ಹುವ್ವ ಇದ್ದರೆ ಈತ ನನ್ನ ನಚ್ಚಿನ ಮಗ ಎಂದು ತಿಳಿಯುತಾಳೆ. ಒಂದು ತೆನೆಗೆ ಒಂದು ಹಿಡಿಕಾಳು ಹೆಚ್ಚಿಗೆ ಬರುವಂತೆ ದೇವಿ ಹರಸುತಾಳೆ. ಮೈಮೇಲೆ ಅರಿವೆ ಇಲ್ಲದಿದ್ದರೂ ನಡದೀತು. ಸತ್ಯಪ್ಪನಿಗಂತೂ ಮೈ ಹೊದಿಕೆ ಇಲ್ಲ. ವಿಶಾಲವಾದ ಆ ಎದೆ, ಎದೆಯ ಮೇಲೆ ಲಿಂಗದ ಕಾಯಿ. ಅವನ ಎದೆಯಾಳದ ಪ್ರೇಮಕ್ಕೆ ಆ ಲಿಂಗವೇ ಸಾಕ್ಷಿ. ಮೈ ಮೇಲೆ ಹರಿಯುವ ನೀರೇ ಶಿವನಿಗೆ ಮಜ್ಜನ ಆ ಪಂಚಾಮೃತ, ಆ ಗಂಗಾ ಕಾವೇರಿಯರ ನೀರು ನಮ್ಮ ಸತ್ಯಪ್ಪನ ಪಾಲಿಗೆ ಬಹುದೂರ. ಆದುದರಿಂದ ಎದೆಯ ಮೇಲೆ ಹರಿಯುವ ನೀರೇ ಸಾಕು.

ನಡುವಿಗೆ ಸುತ್ತಿರುವುದೊಂದು ದೋತರ. ಅದನ್ನು ಏರಿಸಿ ರೂಲ ಮೇಲೆ ಸತ್ಯಪ್ಪ ನಿಂತಿರಬೇಕು. ಇನ್ನೂ ರೂಲು ತಿರುಗುತ್ತಿಲ್ಲ. ಆದರೆ ಮುಂದುವರೆಯುವುದಕ್ಕೆ ಅದು ಹಾತೊರೆಯುತ್ತಿದೆ. ಎತ್ತುಗಳು ತಿರುಗುವುದಕ್ಕೆ ಸಜ್ಜಾಗಿ ನಿಂತಿರುತ್ತವೆ. ಕೈಯಲ್ಲಿ ಎತ್ತಿನ ಮೂಗುದಾರ ಹಿಡಿದುಕೊಂಡು, ನೀಟಾಗಿ ನಿಂತು ತುಸು ಹಿಂದಕ್ಕೆ ಬಾಗಿ 'ಹೇ' ಎಂದು ಎತ್ತುಗಳನ್ನು ಜಬರಿಸುವ ಸತ್ಯಪ್ಪನನ್ನು ನೀವು ನೋಡಬೇಕು. ನೋವಾಖಾಲಿಗೆ ಹೊರಡುವ ಗಾಂಧೀಜಿ ಇಂತಹದೇ ನಿಲವು ಧರಿಸಿ ನಿಂತಿದ್ದನೇ ಎನ್ನುವ ಹಾಗಾಗುತ್ತದೆ!

ಒಂದು ತಿರುವು ಸುತ್ತಿಯಾಯಿತು. ಮೈಯಲ್ಲಿ ಮಿಂಚಿನ ಹೊಳೆ. ಹೃದಯದಲ್ಲಿ ಕಾವು. ಸತ್ಯಪ್ಪ ಹಕ್ಕಿಯಾಗುತ್ತಾನೆ. ಕವಿಯಾಗುತ್ತಾನೆ. ಎತ್ತು ಆಗುತ್ತಾನೆ. 'ನಾವೊಂದು ಬಿತ್ತೀದ, ನಾವೊಂದು ಬೆಳದೀದ, ನಾ ಹೋಗಿ ಒಂದ ಹೊಡೆದಂಟ ತಿಂದರ ಬಡಬಡಗೀಲ ಹೊಡೆದೊ' 'ಹೇ' 'ಹಲ್ಯಾ' 'ಬಸವ ಚೆಲುವ' ಎಂದೆನ್ನುತ್ತ ಹಾಡುವನು, ಎತ್ತುಗಳನ್ನು ಬೆದರಿಸುವನು. ಕಂಕಿ ಒಂದು ಕಡೆ, ಕಾಳು ಒಂದು ಕಡೆ. ಸಂಜೆ ಇಳಿಗೆ ಇಳಿಯುವುದರಲ್ಲಿ ಹೇರುಕಾಳು ಮುತ್ತಿನಂತೆ ಉದುರುವವು. ವಾರದ ಕೊನೆಗೆ ಗೌಡರ ಕಾಳಿನ ರಾಶಿ ಏರಿ ನಿಲ್ಲುವುದು. ಗೌಡಗಿತ್ತಿಯರು ಕೈಯಲ್ಲಿ ಆರತಿ ಹಿಡಿದುಕೊಂಡು ಬಂದು ಪೂಜಿಸುವರು ಸತ್ಯಪ್ಪ ಬಹು ಹೆಮ್ಮೆಯಿಂದ ನಿಂತು ರೂಲು ಬಣ್ಣಿಸುವನು. ಎತ್ತುಗಳನ್ನು ಹೊಗಳುವನು. ಈ ನೆಲದ ಮೇಲೆ ನಿಂತು ರೂಲು ತಿರುವುತ್ತ 'ಹೇ' ಎಂದು ದನಿಗೊಡುತ್ತ ಹಾಡುತ್ತ ತೆನೆಯಿಂದ ಕಾಳನ್ನು ಉದುರಿಸುವುದೇ ಪುಣ್ಯವೆಂದು ಬಣ್ಣಿಸುವನು! ಆಗ ಎಲ್ಲರಿಗೂ ಸತ್ಯಪ್ಪ ಮಾತನಾಡಿದುದೇ ಚಂದವಾಗಿ ತೋರುವುದು. ಅವನ ಹಾಡೇ ಸುಂದರ, ಮಾತೇ ರಮ್ಯ, ಕೃತಿಯೇ ಅಂದ

ಸತ್ಯಪ್ಪ ನಮ್ಮ ಊರವನಲ್ಲ ಆದರೂ ನಮ್ಮವರ ಪಾಲಿಗೆಲ್ಲ ಅವನು ಇದ್ದೂರವನೇ, ವಿಜಾಪುರ ಜಿಲ್ಲೆಯಲ್ಲಿಯ ದೋಣಿ ಎಂಬ ಹಳ್ಳಿಯಿಂದ ಬಂದವ, ಗುಳೇಕಾರ. ದೋಣಿ ಬೆಳೆದರೆ ಓಣೆಲ್ಲ ಜೋಳ ಎಂಬ ಗಾದೆಯ ಮಾತು ಹೇಳುತಾರಲ್ಲ ಆ ಊರಿನವ ಸತ್ಯಪ್ಪ. ಹೊಲ ಇದ್ದವರ ಮಾತು ಬೇರೆ, ಹಣ ಇದ್ದವರ ರೀತಿಯೇ ಬೇರೆ. ಕೂಲಿ ಕುಂಬಳಿಯ ಮೇಲೆ ಜೀವ ಹಿಡಿದುಕೊಂಡು ಬೆಳೆದವ ಸತ್ಯಪ್ಪ ಕುಟುಂಬವಷ್ಟು ದೊಡ್ಡದಲ್ಲದಿದ್ದರೂ

ಅವನ ಪಾಲಿಗೆ ಅದೊಂದು ಮಹಾಪ್ರಪಂಚವೆ. ಮುಪ್ಪಿನ ತಾಯಿ, ಹೆಂಡತಿ, ಮೂರು ಮಕ್ಕಳು. ತಾಯಿ ಹಾಗಲು ಹಣ್ಣು, ಮಕ್ಕಳು ಸಣ್ಣವು. ಮನೆಯ ಕೆಲಸ ಮುಗಿಸಿಕೊಂಡು ಅನುವಿದ್ದಾಗ ಮಡದಿಯೂ ಹೊಲಗೆಲಸಗಳಿಗೆ ಹೋಗುವಳು. ಆದರೆ ಅವಳ ಪಾಲಿಗೆ ಮನೆಯ ಕೆಲಸವೇ ನಾಕು ಬೇಕಾಗಿರುತ್ತದೆ. ಹೀಗಾಗಿ ಸತ್ಯಪ್ಪನೊಬ್ಬನೆ ದುಡಿಯುವವ. ಉಳಿದವರೆಲ್ಲ ಅವನ ತೋಳನೆರವನ್ನೇ ಸರಿಸಿ ಬದುಕುವವರು.

ಸುಗ್ಗಿಯ ಕಾಲ ಬಂದಿತೆಂದರೆ ದೋಣಿಯಿಂದ ಹಿರೇಮಲ್ಲೂರಿಗೆ ಸತ್ಯಪ್ಪ ಗುಳೇ ಹೊರಡುವ. ಮಲ್ಲೂರಿನಲ್ಲಿ ಕುಯ್ಲು ಬಂದಾಗ ದೋಣಿಯೆಲ್ಲ ಒರಿದು. ಅಲ್ಲಿ ಸಜ್ಜೆಯನ್ನು ಒಕ್ಕಿಕೊಂಡು ಇಲ್ಲಿ ಜೋಳದ ತಿರುವಿಗಾಗಿ ಸತ್ಯಪ್ಪ ಪಯಣ ಬೆಳಸುವ. ಕುಯ್ಲಿಗೆ ಬೆಳೆ ಬಂದು ನಿಂತಾಗ ನಮ್ಮೂರ ಜನ ಸತ್ಯಪ್ಪ ಬರುವ ದಾರಿಯನ್ನೇ ನೋಡುವರು. ಈ ರೂಲು ಅವನೇ ಬಂದು ನಡಸಬೇಕು. ಇದು ನಮ್ಮ ಕಣದಲ್ಲಿ ಮೊದಲು ತಿರುಗಬೇಕು. ನಮ್ಮ ರಾಶಿ ಅವನಿಂದ ಮೊದಲು ಏರಬೇಕು. ಹೀಗೆ ಸತ್ಯಪ್ಪನ ದುಡಿಮೆಯನ್ನು ಸ್ವೀಕರಿಸುವುದಕ್ಕೆ ಒಬ್ಬರಿಗಿಂತ ಒಬ್ಬರು ನಮ್ಮೂರಲ್ಲಿ ಮುಂಬರುವರು. ಕ್ಷಿತಕುಲಪಿತರು ತಮ್ಮೊಳಗೆ ಸತ್ಯಪ್ಪನ ದುಡಿಮೆಯನ್ನು ಸ್ವೀಕರಿಸುವುದಕ್ಕೆ ಸಿದ್ಧವಾಗಿ ನಿಂತ ಹೊತ್ತಿನಲ್ಲಿ 'ಬಂದೇ ಶಿವಾ' ಎಂದೆನ್ನುತ್ತ ಸತ್ಯಪ್ಪ ತನ್ನ ಗುಳೆಯ ಸಾಮಗ್ರಿಗಳನ್ನು ಹೊತ್ತುಕೊಂಡು ನಮ್ಮೂರ ಅಗಸೆಯ ಬಾಗಿಲಲ್ಲಿ ಕಾಲಿಡುವನು. ಸತ್ಯಪ್ಪನ ಅಡ್ಡ ಹೆಸರು ಏನೋ! ನಮ್ಮೂರ ಜನಕ್ಕೆ ಗುರುತಿಲ್ಲ. ಎಲ್ಲರೂ ಅವನಿಗೆ ಗುಳೇಕಾರ ಸತ್ಯಪ್ಪ ಎನ್ನುತ್ತಾರೆ.

ಆಗಸ್ಟ ಚಳವಳ ಬಂದಿತು. ವಿಜಾಪುರದಲ್ಲಿ ಬರಗಾಲವೂ ಬಂದಿತು. ಕಂಟ್ರೋಲು ಕಾಲವೂ ಬಂದಿತು. ಎಂದಿನಂತೆ ಕುಯ್ಲು ಬರುವ ಮುನ್ನವೇ ಸತ್ಯಪ್ಪ ನಮ್ಮೂರಿಗೆ ಓಡಿ ಬಂದ. ಹಾಗಲು ಹಣ್ಣಾಗಿದ್ದ ಅವನ ತಾಯಿಯನ್ನು ದರದರನೆ ಎಳೆದುಕೊಂಡು ಹೇಗೋ ಬಂದು ಮುಟ್ಟಿದ. ಎರಡು ಮಕ್ಕಳು. ಇನ್ನೊಂದು ಹಸುಗೂಸನ್ನು ಎದೆಗವಚಿಕೊಂಡು ನೆಲಕ್ಕೆ ಹಿಂಬಡ ಹಚ್ಚದೆ ಉಬ್ಬಸ ಪಡುತ್ತ ಸತ್ಯಪ್ಪನ ಹೆಂಡತಿಯೂ ಗಂಡನ ಬೆನ್ನು ಹಿಡಿದು ಓಡಿ ಬಂದಳು.

'ಯಾಕೋ ಸತ್ಯಪ್ಪ, ಈ ವರುಷ ಲಗೂನ ಬಂದೆಲ್ಲ?' ಎಂದು ನಮ್ಮೂರಲ್ಲಿ ಯಾರೋ ಕೇಳಿದರು.

'ನಮ್ಮ ಮುದುಕಿಗೆ ರಾಜಕೀಯ ಲಹರಿ. ರಾಜಧಾನಿಯನ್ನು ಬದಲಿಸಲು ಆಕೆ ಮನಸ್ಸು ಮಾಡಿದಳು.'

'ಏನು? ದಿಲ್ಲಿಯಿಂದ ದೌಲತಾಬಾದಿಗೆ...........'

'ಹೌದಪ್ಪ, ಅದೇ ಲಹರಿ'

ನಿಜ. ಮುಹಮ್ಮದನಂತಹರ ರಾಜಕೀಯ ಲಹರಿಯ ಸೆಳುವಿಗೆ ಸಿಕ್ಕೇ ಅವನು ನಮ್ಮೂರಿಗೆ ತೇಲಿ ಬಂದ. ಈ ಸಾಮ್ರಾಜ್ಯಶಾಹಿಯ ಹುಚ್ಚು ಆಡಳಿತದಲ್ಲಿ, ಈ ಕಾಲದಲ್ಲಿ ಒಂದೇ ಕಡೆ ನಿಂತು ಜನತೆ ಬದುಕುವಂತಿಲ್ಲ. ಓಡಬೇಕು ಆ ಮೂಲೆಯಿಂದ ಈ ಮೂಲೆಯವರೆಗೆ. ಹಸಿವೆಯನ್ನು ಹತ್ತಿಕ್ಕುವುದಕ್ಕಾಗಿ, ರಾಜಕೀಯ ಹೋರಾಟವನ್ನು ಪ್ರಜ್ವಲಿಸುವುದಕ್ಕಾಗಿ, ಆಳುವವರ ಪೀಡೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಜನತೆ ಗುಳೇ ಕಟ್ಟಬೇಕು ತಲೆ ಮರೆಸಿಕೊಂಡು ತಿರುಗಬೇಕು. ಕಾನನ ಕಂದರ ಸೇರಬೇಕು! ಸತ್ಯಪ್ಪ ಬಂದುದು ಹಸಿವೆಯೊಡ್ಡಿದ ಸಾವಿನ ಸರಪಳಿಯಿಂದ ಪಾರಾಗುವುದಕ್ಕೆ!

'ಸತ್ಯ, ನನಗಾಗಿ ಅಲ್ಲ. ನಿನ್ನ ಮಕ್ಕಳಿಗಾಗಿ ನಡಿ. ತಪ್ಪಲು ತಿಂದು ಬದುಕೋನು. ಮಲ್ಲೂರಿಗೆ ನಡಿ' ಎಂದು ಹೇಳಿ ಸತ್ಯಪ್ಪನ ತಾಯಿ ಹಗಲೂ ರಾತ್ರಿ ಮಗನನ್ನು ಕಾಡಿ ಬೇಡಿ, ನಿಯತ ಕಾಲಕ್ಕಿಂತ ಮುನ್ನವೇ ನಮ್ಮೂರಿಗೆ ಮಗನನ್ನು ಗುಳೇ ಕಟ್ಟಿಸಿಕೊಂಡು ಬಂದಳು. ಕೂಸಿಗೆ ಹಾಲನುಣ್ಣಿಸುವುದಕ್ಕೆ ಸೊಸೆಯ ಎದೆಯಲ್ಲಿ ಹನಿ ಹಾಲಿಲ್ಲ. ಬೆಳೆಯುವ ಮಕ್ಕಳು ಎರಡು ತುತ್ತಿಗೂ ಸಾಲದ ರೊಟ್ಟಿಯನ್ನು ತಿಂದು ನೀರು ಸಾಲದ ಸಸಿ ಕಮರುವಂತೆ ಆಗಲೇ ಕಮರುತ್ತ ನಡೆದಿವೆ. ಸತ್ಯ, ಓ ನನ್ನ ಸತ್ಯ, ನಿನ್ನ ರಟ್ಟೆಯ ಬಲ ಕುಂದತೊಡಗಿದೆ. ಮುಖ ಕಳೆಗುಂದಿದೆ. ಕಾಲುಕೈಗಳು ಕೊರಕಲು ಬಿದ್ದಿವೆ. ನಾನೇನು? ಇಂದಿಗೊ ನಾಳೆಗೊ ಹೋಗುವವಳು. ಒಂದು ಕಾಲು ಊರ ಹೊರಗೆ, ಒಂದು ಕಾಲು ಆಗಸೆಯ ಬಾಗಿಲದ ಹತ್ತಿರ! ನಡಿ. ನಿನ್ನ ಮಕ್ಕಳ ಬದುಕನ್ನು ನಚ್ಚಿ ಗುಳೇ ಈಗಲೇ ಕಟ್ಟು!

ತಾಯಿಯ ಹಂಬಲವನ್ನು ಕೇಳಲಾರದೆ ಸತ್ಯಪ್ಪ ಸುಗ್ಗಿ ಇನ್ನೂ ತಿಂಗಳ ಮೇಲೆ ಇದ್ದರೂ ಗುಳೇ ಕಟ್ಟಿಕೊಂಡು ಬಂದುಬಿಟ್ಟನು. ಮಾರ್ಗ ಕ್ರಮಣದ ಆಯಾಸ! ವರುಷದ ಉದ್ದಕ್ಕೂ ಹಸಿವೆಯ ತಾಂಡವನೃತ್ಯ!

ಚಳವಳಿ, ಬರಗಾಲ, ಕಳ್ಳ ಸಂತೆಯ ಮೋಸ ಎಲ್ಲಾ ಮೇಳೈಸಿ ಬಂದು ಸತ್ಯಪ್ಪನ ಕುಟುಂಬದ ಮೇಲೆ ಪರಿಣಾಮ ಮಾಡಿದ್ದುವು.

ಅದೇನು ಪುಣ್ಯವೋ ಏನೋ ! ಸಮ್ಮ ಹಳ್ಳದ ಮೇಲಿನ ಹೊಲ ಸಂಪಾಗಿ ಬೆಳೆದು ಬಿಟ್ಟಿತ್ತು. ನಾಲ್ಕು ಎಕರೆ ಹೊಲಕ್ಕೆ ಇಪ್ಪತ್ತು ಹೇರು ಜೋಳ ! ಒಂದೊಂದು ತೆನೆಯೂ ಮುತ್ತಿನ ಚೆಂಡು. ಖಗ ಸಂಕುಲವೆಲ್ಲವೂ ಸುತ್ತು ಮುತ್ತಲಿನ ಹಳ್ಳಿ ಪಳ್ಳಿಗಳಿಂದ ಗುಳೇ ಕಟ್ಟಿಕೊಂಡು ಬಂದು ಅದೇ ಹೊಲದಂಚಿನಲ್ಲಿ ಬೀಡು ಬಿಟ್ಟಿದ್ದವು. ಅವು ಒಂದು ಕಾಳು ಕುಕ್ಕಿದರೆ ಆ ಜಾಗದಲ್ಲಿ ಎರಡು ಕಾಳು ಮೂಡಬೇಕು. ಜೋಳ ಕಬ್ಬು ನಿಂತಂತಾಗಿತ್ತು. ಗರಿ ಬಾಳೆಯ ಎಲೆಯಂತೆ ಕಂಗೊಳಿಸುತ್ತಿದ್ದವು. ಊರ ಸೇರುವವರೆಲ್ಲ ಅದೇ ಹೊಲದ ದಾರಿ ಹಿಡಿದು ಬರಬೇಕು.

ಸತ್ಯಪ್ಪ ಗುಳೇ ಕಟ್ಟಿಕೊಂಡು ಬಂದು ಸಂಜೆಗೇ ಮಾಸ್ತರರ ಮನೆಗೆ ಬಂದು 'ಮಾಸ್ತರರೇ' ಎಂದು ಕೂಗಿದ. ಮಾಸ್ತರು ಇದ್ದಿಲ್ಲ. ಅವರಿಗೆ ವರ್ಗವಾಗಿದ್ದಿತು. ಮೂಕಾನೂ ಮನೆಯಲ್ಲಿರಲಿಲ್ಲ. ಕಾನಳ್ಳಿಗೆ ಹೆಂಡತಿಯನ್ನು ಕರೆಯಲು ಹೋಗಿದ್ದನು. ಬನಶಂಕರಿಯ ತಾಯಿ ಸತ್ಯಪ್ಪನನ್ನು ಕುಳ್ಳಿರಿಸಿ ಅವನ ಕ್ಷೇಮ ಸಮಾಚಾರ ಕೇಳಿಕೊಂಡು ಸಂತೋಷದಿಂದ ಸತ್ಯಪ್ಪನಿಗೆ ಹಳ್ಳದ ಹೊಲದ ಕುಯ್ಲಿಗಾಗಿ ಗುತ್ತಿಗೆ ಕೊಟ್ಟರು. ಸತ್ಯಪ್ಪನಿಗೂ ಸಂತೋಷ ! ಬನಶಂಕರಿಯ ತಾಯಿಗೂ ಆನಂದ !

ಮಾತು ಮುಗಿಸಿಕೊಂಡು ಮನೆಗೆ ಹೋದಾಗ ಸತ್ಯಪ್ಪನ ತಾಯಿ ನೆಲಹಿಡಿದು ನರಳುತ್ತಿದ್ದಳು. ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ಸಾಗಿ ಬಂದ ಮುದುಕಿಯನ್ನು ದಾರಿಯ ದಣಿವು ಹಾಸಿ ಹೊದಿಸಿ ಮಲಗಿಸಿ ಬಿಟ್ಟಿದ್ದಿತು. ರಾತ್ರಿ ಹೊಟ್ಟೆಯಲ್ಲಿಷ್ಟು ಗಂಜಿ ಇಳಿದಾಗ ಮುದುಕಿ ತುಸು ನಕ್ಕಿತು.

ವಾರವೊಂದೊಂದರಂತೆ ಉರುಳಿದವು. ತಿಂಗಳು ಮೂಡಿ ತಿಂಗಳು ಮುಳುಗಿದವು ಗಾಳಿ ಬೀಸಿದಾಗ ಸೊಂಯ್ ಎಂದು ಕೇಳುವ ಜೋಳದ ಗರಿಯ ಸಪ್ಪಳ ನಿಂತಿತ್ತು. 'ಹೇ' ಎಂದು ಹಕ್ಕಿ ಸೋವವರ ಕೂಗು ಇಲ್ಲವಾಗಿದ್ದಿತು. ತೆನೆ ಕುಯ್ದು ಸಿವುಡು ಕಟ್ಟಿ ನಿಲ್ಲಿಸಿದ ಮೆದೆಗಳೆಲ್ಲ ಹೊಲದ ಮೂಲೆ ಮೂಲೆಗಳಲ್ಲಿ ಎದ್ದು ಕಾಣುತ್ತಿದ್ದವು.

ಸುಂಕದ ಕಟ್ಟೆಯ ಕೆರೆಯ ಮೇಲೆ ಹಾಯ್ದು ಸಿದ್ದನ ಗುಡ್ಡದ ಮೇಲೆ ಏರಿ ಬಂದೆ. ಎಷ್ಟು ಗುಡಿ! ಎಷ್ಟು ಗೋಪುರ! ಎಷ್ಟು ದೇವರು! ಹಾಡು, ಕುಣಿತ, ನಗೆ, ಚೀರು! ಅಲ್ಲೆಲ್ಲೊ ದುಃಖವಿದೆ, ಸಾವಿದೆ, ಬಿಡುಗಡೆಯ ಹೋರಾಟವಿದೆ. ಇದಿರಿಗಿರುವ ದೃಶ್ಯ ಇದೇನು ಹಾಗಾದರೆ? ಇಲ್ಲೂ ಅದೇ ನೋವಿದೆ. ಆದರಿದು ದುಃಖದ ಮರೆಯ ನಗು!

ಹಳ್ಳದ ಹೊಲದ ಹತ್ತಿರ ಹತ್ತಿರ ಹಾಯ್ದು ಬಂದಂತೆ ಹಾಡೊಂದು ಕೇಳ ಬಂದಿತು. ಎತ್ತಿನ ಹಾಡು. ಸತ್ಯಪ್ಪ ಹೇಳುವವ. ರೂಲು ತಿರುಗುತ್ತಿದೆ. ಎತ್ತು ಸುತ್ತು ಹಾಕುತ್ತಿವೆ. ಕಾಳು ಒಂದು ಕಡೆ, ಕುಂಕಿಯೊಂದು ಕಡೆ. ನಿಂತು ನೋಡಬೇಕು. ಸತ್ಯಪ್ಪನ ಹಾಡು ಕೇಳಬೇಕು. ಅವನೇ ಕವಿ. ಅವನೇ ಎತ್ತು. 'ಮಾಗಿಯ ಹೊಡೆಯಾಗ ನನ ಕೈಲಿ ಮಾಯದಿಂದ ಮಾಡಿಸಿ ಕೊಂಡ್ಯಾ. ನಾ ಹೋಗಿ ಒಂದ ತೆನೆದಂಟ ತಿಂದರ ಕಲ್ಲು ಕಲ್ಲಿಲೆ ಹೊಡೆದೋ. ನಮ ಜೀವ ಕೈಲಾಸಕ ಹೋದಾವೊ!' ಸತ್ಯಪ್ಪ ಹಾಡುತ್ತಿದ್ದಾನೊ ಅಳುತ್ತಿದ್ದಾನೊ! ಕಂಠದಲ್ಲಿ ಸುಖವಿದೆಯೊ ದುಃಖವಿದೆಯೊ! ಮುಖದ ಮೇಲೆ ನಗೆಯು ಮಿಂಚಿದೆ. ಆದರೆ ಕಂಠದಲ್ಲಿ ಏನದು?

ನಾನು ಬಂದ ಮೇಲೆ ನಾಲ್ಕು ಸುತ್ತು ತಿರುವಿ ಹಂತಿಯನ್ನು ನಿಲ್ಲಿಸಿ ಸತ್ಯಪ್ಪ ಹತ್ತಿರ ಬಂದ. ಎಲೆ ಅಡಿಕೆಯಾಯಿತು. ಹೊಲದ ಬಣ್ಣನೆಯಾಯಿತು. ಎತ್ತಿನ ಹೊಗಳಿಕೆ ಆಯಿತು. ಅಷ್ಟೊತ್ತಿಗೆ ಅಗಸೆಯಿಳಿದು ಯಾರೋ ಹೊಲದ ಅಡ್ಡದಾರಿ ಹಿಡಿದು ನಮ್ಮ ಕಡೆಗೇ ಬಂದರು. ಬಂದವಳು ಸತ್ಯಪ್ಪನ ಹೆಂಡತಿ!

ಅತ್ತೆಯ ಮೈಯಲ್ಲಿ ಕ್ಷೇಮವಿಲ್ಲ. ಗಂಡನಿಗೆ ಹೇಳಲು ಬಂದಿದ್ದಾಳೆ. ಇಲ್ಲಿಗೆ ಬಂದಮೇಲೆ ನೆಲ ಹಿಡಿದ ಮುದುಕಿ ಮೇಲಕ್ಕೆ ಎದ್ದೆ ಇಲ್ಲ ಕಳೆದ ವಾರದಿಂದ ಮುದುಕಿಗೊಂದು ಕನಸು! ದೋಣಿಗೆ ಹೋಗಬೇಕು! ತಾನೊಬ್ಬಳೇ ಹೋಗಬೇಕು. ಅಲ್ಲಿಯೆ ನೆಲಹಿಡಿದು ಅಲ್ಲಿಯೆ ಮಲಗಬೇಕು. ಅದೇ ನೆಲ, ಅದೇ ಮಣ್ಣು, ತನಗೆ ಅಲ್ಲೇ ಮುಕ್ತಿ ಸಿಗಬೇಕು! ಮುದುಕಿಗೆ ಹುಚ್ಚು ಹಂಬಲ. ಅದಕ್ಕೆ ನಮ್ಮೂರಲ್ಲಿ ಕೆಲವರು ದಿವ್ಯ ಹಂಬಲವೆಂದವರೂ ಉಂಟು.

'ಬೇಡ ನೀನು ನೆಟ್ಟಗಾಗುತ್ತೀದಿ. ನಾಲ್ಕು ದಿನ ಹೆಚ್ಚಿಗೆ ಗಂಜಿ ಬಿದ್ದರೆ ಗಡವಾಗುತ್ತೀದಿ. ದೋಣಿಗೆ ಹೋದರೆ ಎರಡು ದಿನದ ದಾರಿ. ನೀನು ಆಳೀ ಆಗುವದಿಲ್ಲ.' ಹೀಗೆ ಸತ್ಯಪ್ಪ ತಾಯಿಗೆ ಹೇಳಿದರೆ ಆಕೆಗೆ ತನ್ನದೇ ಹಟ.

'ನಾನು ಅಲ್ಲಿಯೇ ಸಾಯಬೇಕು ನನಗೆ ಇನ್ನೊಂದು ನೆಲದ ಮಣ್ಣಾಗುವದಿಲ್ಲ. ಬೇಗ ಒಯ್ಯಿ ಸತ್ಯ.'

'ಇಲ್ಲಿ ಈ ಮಕ್ಕಳು ಮರಿ. ನೀನು ಅಲ್ಲೆ. ದುಡಿದು ತಂದು ಹಾಕುವವ ರಾರು? ಅಲ್ಲಿ ಗಂಜಿಗೆ ಹಿಟ್ಟೆಲ್ಲಿಂದ ತರುವುದು?'

'ನನಗೆ ಗಂಜಿಯ ಚಿಂತೆ ಇಲ್ಲ. ನಿನ್ನ ಮಕ್ಕಳು ಇಲ್ಲೆ ಇರಲಿ. ನಾನು ಹೇಳಿ ಕಳಿಸತೇನಿ, ನೀನು ಬಂದು ಮಣ್ಣು ಹಾಕಿ ಬರುವಿಯಂತೆ.'

ಏಸದಿನವೂ ತಾಯಿ ಮಕ್ಕಳ ಜಗಳ ನಡದೇ ಇದ್ದಿತು. ಈಗ ಆಕೆಗೆ ಉಬ್ಬಸ. ಇಂದೊ ನಾಳಿಯೊ ಅದೂ ನಿಲ್ಲುವದು.

ಈ ಸುದ್ದಿಯನ್ನು ಗಂಡನಿಗೆ ಹೇಳಲು ಹೆಂಡತಿ ಬಂದಿದ್ದಳು. ಸತ್ಯಪ್ಪ ಹಂತಿಯನ್ನು ನಿಲ್ಲಿಸಿ ರೂಲಿಗೆ ನಮಸ್ಕಾರ ಮಾಡಿ ಮನೆಗೆ ನಡೆದನು. ಮುದುಕಿಗೆ ಗಟ್ಟಿಸಿ ಮಾತನಾಡುವುದಕ್ಕೆ ಬಾಯಿಯೆ ಇದ್ದಿಲ್ಲ. ನಾಲಿಗೆ ಒಳಗೆ ಸೆಳೆದಿತ್ತು. 'ಸತ್ಯ, ನನ್ನ ದೋಣಿಯ ನಾಲಿನಾಗ ಮುಚ್ಚಪ್ಪ' ಎಂದು ಮುದುಕಿ ಬಹು ಪ್ರಯಾಸಪಡುತ್ತ ಮಗನ ಮುಖ ನೋಡಿ ಅಂದಳು. ತಡವಾದರೆ ತಾಯಿಯ ಹಂಬಲನ್ನು ತಾನು ಪೂರೈಸದೆ ಹೋದೇನೆಂದು ಸತ್ಯಪ್ಪನಿಗೆ ಅನ್ನಿಸಿತು. ಗುಡಿಗೇರಿಯವರೆಗೆ ಚಕ್ಕಡಿ ಮಾಡಿಕೊಂಡು ತಾಯಿಯನ್ನು ಕುಳ್ಳಿರಿಸಿಕೊಂಡು ಗಾಡಿಯನ್ನೇರಲೆಂದು ಹೊರಟನು. ಅಲ್ಲಿಂದ ದೋಣಿಯವರೆಗೆ ಪ್ರವಾಸ. ಹೆಂಡತಿ ಮಕ್ಕಳನ್ನು ಹಿಂದೆ ಬಿಟ್ಟು ತಾಯಿ ಯನ್ನು ಕರೆದುಕೊಂಡು ಸತ್ಯಪ್ಪ ಹೊರಟು ನಿಂತನು. ಜತೆಗೆ ಮೂರು ದಿನ ಸಾಕಾಗುವಷ್ಟು ಹಿಟ್ಟ ಮಾತ್ರ. ಹೆಚ್ಚಿಗೆ ಕಾಳು ಒಯ್ಯಲು ಬಾರದು. ಕಂಟ್ರೋಲು ದಿನ. ಆ ಮೂರು ದಿನದ ಹಿಟ್ಟು. ಅದಕ್ಕಾಗಿ ಜೀವ ಎಷ್ಟೊಂದು ಕಷ್ಟಪಡಬೇಕಲ್ಲ, ಶಿವನೆ!

ತಾಯಿಯನ್ನು ದೋಣಿಯಲ್ಲಿ ಸುಖವಾಗಿರುವ ಏರ್ಪಾಡು ಮಾಡಿ ತಿರುಗಿ ಬರುತ್ತೇನೆಂದು ಹೇಳಿ ಸತ್ಯಪ್ಪ ಹೊರಟು ಹೋದನು. ಮುಂದೆ ಹದಿನೈದು ದಿನಗಳು ಸಂದವು. ಹದಿನೆಂಟನೆಯ ದಿನದ ಮೇಲೆ ಕಾಗದವೊಂದು ದೋಣಿಯಿಂದ ಮಲ್ಲೂರಿನ ಗುಳೇಕಾರನ ಕುಟುಂಬಕ್ಕೆಂದು ಬಂದಿತು.

ಸತ್ಯಪ್ಪನ ಹೆಂಡತಿ ಕಾಗದವನ್ನು ಓದಿಸುವುದಕ್ಕೆ ನನ್ನೆಡೆಗೆ ತಂದಳು. ಸತ್ಯಪ್ಪ ಯಾರಿಂದಲೋ ಕಾಗದ ಬರೆಯಿಸಿದ್ದನು. ತಾಯಿ ಸೋಮವಾರದ

ಮುಂಜಾವಿನಲ್ಲಿ ತೀರಿಕೊಂಡಳು. ಒಳಗೆ ಕರೆದುಕೊಳ್ಳುವ ದಿನವೂ ನಿನ್ನೆ ಮುಗಿಯಿತು. ಮಲ್ಲೂರಿಗೆ ಹೊರಟು ಬರಬೇಕೆಂದು ಹವಣಿಸುತ್ತಿದ್ದೇನೆ. ಆದರೆ ಮೈಯಲ್ಲಿ ಚನ್ನಾಗಿಲ್ಲ. ಆದುದರಿಂದ ನೀನೇ ಇನ್ನೊಂದು ಕಾಗದದ ಅಭಿಪ್ರಾಯ ನೋಡಿಕೊಂಡು ಮಲ್ಲೂರಿನಿಂದ ದೋಣಿಗೆ ಹೊರಟು ಬರಬೇಕೆಂಬಾಶಯದ ಸುದ್ದಿಯನ್ನು ಸತ್ಯಪ್ಪ ಅಂಚೆಯ ಮೂಲಕ ಹೆಂಡತಿಗೆ ತಿಳಿಸಿದ್ದನು.

ಅನಿರೀಕ್ಷಿತವಾಗಿ ಅವನಿಂದ ಎರಡನೆಯ ಕಾಗದವೂ ಬಂದಿತು. ಮನೆಯಲ್ಲಿ ರಾತ್ರಿಯ ಹೊತ್ತಿಗೆ ಗಂಜಿಗೂ ಕೂಡ ಹಿಟ್ಟಿಲ್ಲ. ಸುಗ್ಗಿಯ ಕಾಳನ್ನು ಹೇಗಾದರೂ ಮಾಡಿ ತನ್ನೊಡನೆ ತೆಗೆದುಕೊಂಡು ಹೊರಟು ಬರಬೇಕೆಂದು ಆ ಸುದ್ದಿಯನ್ನು ಗುಳೇಕಾರನ ಧರ್ಮಪತ್ನಿಗೆ ತಂದಿತು.

ಅದೆಲ್ಲ ಸರಿ. ಆದರೆ ಕಂಟ್ರೋಲು ದಿನಗಳು. ಒಂದು ತಾಲೂಕಿನಿಂದ ಇನ್ನೊಂದು ತಾಲೂಕಿಗೆ ಕಾಳನ್ನು ಒಯ್ಯಲು ಬರುವಂತಿಲ್ಲ. ದೋಣಿಗೆಂತು ಒಯ್ಯುವುದು? ಒಯ್ಯದಿದ್ದರೆ ಗಂಜಿಗೆ ಗತಿ ಹೇಗೆ? ಗತಿಗಿತಿಯ ಪ್ರಶ್ನೆಯೆಲ್ಲಿಂದ ಬಂದೀತು! ಹಸಿವೆಯ ಮುಂದೆ ಕಾಯಿದೆ ಗೀಯದೆಗಳ ಮಾತು ಯಾರು ಕೇಳುತ್ತಾರೆ!

ಒಂದು ನಸುಕಿನಲ್ಲಿ ಸತ್ಯಪ್ಪನ ಹೆಂಡತಿ ಊರು ಬಿಟ್ಟಳು. ಸುಗ್ಗಿಯಲ್ಲಿ ಕೂಡಿಸಿದ ಅರ್ಧಚೀಲ ಜೋಳವನ್ನು ತನ್ನೊಡನೆ ತೆಗೆದುಕೊಂಡು ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಮಲ್ಲೂರ ಸೀಮೆಯನ್ನು ದಾಟಿ ಕೆಂಗಾಪುರದ ಹದ್ದನ್ನು ಸೇರುವುದರಲ್ಲಿದ್ದಳು. ಊರ ಅಗಸೆಯ ಹತ್ತಿರ ಅವಳನ್ನು ಗಂಡಾಂತರದ ಸುದ್ದಿಯೊಂದು ಸ್ವಾಗತಿಸಲು ಸಿದ್ಧವಾಗಿ ನಿಂತಿತ್ತು.

ಅಲ್ಲಿ ಪೋಲೀಸರ ಕಾವಲಿದೆ. ಜೋಳವನ್ನು ಸಾಗಿಸುವಂತಿಲ್ಲ. ನ್ಯಾಯ ಮುರಿದವರಿಗೆ ದಂಡನೆಯುಂಟು!

ಅವಳು ಅಂಗಲಾಚಿ ಬೇಡಿಕೊಂಡಳು. ಗಂಡನ ಮೈಯಲ್ಲಿ ನೆಟ್ಟಗಿಲ್ಲ. ಗಂಜಿಗಿಷ್ಟು ದುಡಿದದ್ದನ್ನು ಒಯ್ಯುತ್ತಿದ್ದೇನೆ. ನನ್ನ ಕುಂಕುಮವನ್ನು ಕಾಯಬೇಕೆಂದು ಬಿದ್ದು ಬೇಡಿಕೊಂಡಳು. ಕಾವಲುಗಾರನಿಗೆ ದಯೆಯಿರಲಿಲ್ಲ. ಜೋಳದ ಚೀಲವನ್ನು ಸರಕಾರದ ಕಾಳಿನ ಸಂಗ್ರಹದಲ್ಲಿ

ಸೇರಿಸಿ ನಾಲ್ಕು ರೂಪಾಯಿಗಳನ್ನು ಅವಳ ಕೈಗಿತ್ತನು ವಿಜಾಪುರ ಜಿಲ್ಲೆಯಲ್ಲಿ ನಾಲ್ಕು ರೂಪಾಯಿಗೆ ಎರಡು ಅಟವಿ ಜೋಳ! ಒಂದು ಸರೆ ಹೊತ್ತಿನ ಊಟಕ್ಕೆ ಮಕ್ಕಳಿಗೂ ಸಾಲದು. ಗಂಡ, ತಾನು, ಮಕ್ಕಳ ಗತಿ? ಶಿವನೇ ಎಂದು ಅವಳು ಕಂಬನಿಗರೆದಳು. ದುಃಖದ ಭರದಲ್ಲಿ ಅವಳಿಗೆ ದೋಣಿಯ ದಾರಿಯೇ ಕಾಣಲಿಲ್ಲ !

'ಜೋಳವನ್ನು ತಂದೆಯೇನೆ... .....' ಸತ್ಯಪ್ಪ ದೋಣಿಯಲ್ಲಿ ಹಾಸುಗೆಯ ಮೇಲೊರಗಿಕೊಂಡು ಕನವರಿಸುತ್ತಿದ್ದನು.

'ಸರಕಾರಕ್ಕೆ ದಯೆಯಿಲ್ಲರೀ'

'ಮಾಸ್ತರರಿಗೆ ಮಾತುಕೊಟ್ಟು ಬಂದಿದ್ದೇನೆ. ಅವರ ಕಣದ ರಾಶಿ ಇನ್ನೂ ಏರಿಲ್ಲ; ನಾನು ರೂಲು ತಿರುಗಿಸಲು ಹೋಗಬೇಕಲ್ಲ... ....'

'ಮೈಯಲ್ಲಿ ನೆಟ್ಟಗಿಲ್ಲ ದಣಿಯು ಬೇಡಿರೀ........'

'ಮಾಸ್ತರರ ರಾಶಿಯನ್ನು ಸಿದ್ಧಮಾಡಬೇಕಲ್ಲ ಮತ್ತೆ........'

'ಮಲಗಿಕೊಳ್ಳಿರೀ ಆಯಾಸವಾಗುತ್ತದೆ........'

ಸತ್ಯಪ್ಪ ಹೆಂಡತಿಯ ಮಾತು ಕೇಳಿ ಕಣ್ಣು ಮುಚ್ಚಿದನು. ಇದಿರಿಗೆ ಅದೇ ಎತ್ತು. ಅದೇ ರೂಲು. ಅದೇ ಹಾಡು. 'ನಾವೊಂದು ಬಿತ್ತೀದ ನಾವೊಂದು ಬೆಳೆದೀದ. ನಾ ಹೋಗಿ ಒಂದ ಹೊಡೆದಂಟ ತಿಂದರ ಬಡ ಬಡಗಿಲೆ ಹೊಡೆದೊ'

ಪೋಲೀಸಿನವರಿಗೆ ಜೋಳವನ್ನು ಒಪ್ಪಿಸಿ ಸತ್ಯಪ್ಪನ ಹೆಂಡತಿ ಮುಂದು ಮುಂದಕ್ಕೆ ನಡೆದಳು. ಬಲಗಣ್ಣು ಹಾರಿತು. ಕಾಗೆಗಳು ಅಷ್ಟು ಬಂದವು.

'ಯಾರಲ್ಲಿ........?' ಅದು ಸತ್ಯಪ್ಪನ ಕೂಗು. ಅಹುದೇನು ?

'ನಾನು ಇದ್ದೇನರಿ........' ಅಹುದು. ಸತ್ಯಪ್ಪ ಹೆಂಡತಿಯನ್ನು ಒದರುತ್ತಿದ್ದನು. ಅವಳು ಉತ್ತರ ಕೊಟ್ಟಳು.

'ಗಂಟಲು ಆರಿದೆ. ತುಸು ನೀರು ಬಿಡುತ್ತೀಯ ! ಸಂಕಟ........'

'ತರುತ್ತೇನರೀ... .....'ಎಂದೆನ್ನುತ್ತ ಅತ್ತಿತ್ತ ನೀರಿಗಾಗಿ ಅವಳು ಹಂಬಲಿಸಿದಳು. ಹತ್ತಿರದಲ್ಲಿ ಕೇಂಗಾಪುರದ ಸವಳು ಬಾವಿಯಿದ್ದಿತು. ಅವಳ ಜೀವ ಜಲ್ಲೆಂದಿತು. ಮನಸ್ಸು ಗಟ್ಟಿ ಮಾಡಿದಳು. ಮಕ್ಕಳನ್ನು

ಮುಂದಕ್ಕೆ ಕಳಿಸಿದಳು. ಗಂಡನ ಗಂಟಲು ಆರುತ್ತಿದೆ. ನೀರು ಬಿಡಬೇಕು ನೀರು. ಅವಳು ಗಂಡನ ಸಂಕಟ ಕಾಣಲಾರದೆ ನೀರಿನ ನೆಲೆ ನೋಡ ಬಯಸಿದಳು !

ತಾಯಿ ಬರಲಿಲ್ಲ. ಕೂಸುಗಳು ಅವ್ವಾ ಎಂದು ಅಳತೊಡಗಿದವು

ದೂರದ ದೋಣಿಯಲ್ಲಿ ಸತ್ಯಪ್ಪನ ಗಂಟಲು ಆರಿದ್ದಿತು. ಅವನೀಗ ಎಚ್ಚರಾಗದಂತಹ ನಿದ್ರೆಯಲ್ಲಿ ಲೀನವಾಗಿ ಹೋಗಿದ್ದನು. ಆ ನಿದ್ರೆಯಿಂದ ಪುನಃ ಅವನು ಏಳುವಂತಿಲ್ಲ. ಹೆಂಡತಿಯ ಬರವನ್ನು, ಮಕ್ಕಳ ನೋಟವನ್ನು ಬಯಸುತ್ತ ಮಲಗಿಕೊಂಡಲ್ಲಿಯೆ ಮಲಗಿಕೊಂಡಿದ್ದನು.

ಈ ಮಧ್ಯದಲ್ಲಿ ಬಂಗಾಲ ಕರ್ನಾಟಕದಲ್ಲಿ ಪತ್ರಿಕೆಗಳು ಅನೈಸರ್ಗಿಕ ಸಾವಿನ ದೂತನಾದ ಹಸಿವೆಯ ಕೈಯಲ್ಲಿ ಪ್ರಾಣ ಕೊಟ್ಟವರ ಯಾದಿಯನ್ನು ಪ್ರಕಟಿಸುತ್ತಲೆ ಇದ್ದವು ! ಅದನ್ನೋದಿದ ಬಡವರಿಗೆ ಆಶ್ಚರ್ಯವಾಗಲಿಲ್ಲ, ಶ್ರೀಮಂತರಿಗೆ ದುಃಖವಾಗಲಿಲ್ಲ.

ಹಿರೇಮಲ್ಲೂರಿನಲ್ಲಿ ಒಂದು ಕಡೆ ಯಾವುದೋ ಒಂದು ನೋವು ಜನಮನದಲ್ಲಿ ಬೇರು ಬಿಟ್ಟು ನಿಂತಿತ್ತು. ಸುಗ್ಗಿ ಕಳೆದು ಸುಗ್ಗಿ ಬಂದಿತು. ಸತ್ಯಪ್ಪ ತಿರುಗಿ ಬರಲೇ ಇಲ್ಲವಲ್ಲ ಎಂಬ ಸೊಲ್ಲು ಆ ಊರಿನಲ್ಲಿ ಅಲ್ಲಲ್ಲಿ ಎದ್ದು ಜನರ ಮರುಕ ಕೊಳ್ಳುತ್ತಿತ್ತು.

ಸತ್ಯಪ್ಪ ಬರಲಿಲ್ಲ. ಎಷ್ಟು ಎತ್ತು ಹೂಡಿ ಎಷ್ಟು ಮಂದಿ ನಿಂತು ರೂಲು ನಡಸಿದರೂ ಅದು ನಡೆಯಲಿಲ್ಲ. ಸತ್ಯಪ್ಪನೇ ಬಂದು ಇದನ್ನು ತಿರುಗಿಸಿದರೆ ತಿರುಗಿಸಬೇಕು. ಅವನು ಮುಟ್ಟಿದ ಕಲ್ಲಿಗೆ ಜೀವ ತುಂಬುತ್ತದೆ' ಎಂದು ಹಿರೇಮಲ್ಲೂರಿನ ಜನತೆ ಇಂದಿಗೂ ಹೇಳುತ್ತಿದೆ.

ನಿಜ. ಈ ರೂಲು ಗುಳೇಕಾರ ಸತ್ಯಪ್ಪನ ಕರ್ಮಕಥೆಗೆ ಸಾಕ್ಷಿ. ಮುಂದೆ ಬರುವ ನಮ್ಮ ಪೀಳಿಗೆ 'ಕಲ್ಲಿಗೂ ಹೃದಯವಿತ್ತು; ಮನುಷ್ಯನಿಗೆ ಮಾತ್ರ ಇರಲಿಲ್ಲ.' ಎಂದು ಇಂದು ಆಳುವವರ ಆಳ್ವಿಕೆಯನ್ನು ಶಪಿಸದಿರದು !

---

# ವಿದ್ಯಾರ್ಥಿ ಪೀರಣ್ಣ!

ಯಾರಿವನು ?

ಶಿವರಾತ್ರಿಯ ಬಿಸಿಲು. ಮೇಲೆ ಪ್ರಖರವಾದ ನೇಸರು. ಕೆಳಗೆ ಲೈನದಾರಿಯ ಮಳಲು. ದನಕರುಗಳು ಮೇಯುವುದನ್ನು ಬಿಟ್ಟು ಗಿಡ ಮರಗಳ ತಂಪಿನಲ್ಲಿ ಮೆಲುಕಾಡಿಸುತ್ತ ಮಲಗಿಕೊಂಡು ಬಿಟ್ಟಿವೆ. ಇದಿರಿನಲ್ಲಿ ಚಿನ್ನಾಟವಾಡುವ ಮೃಗಜಲವನ್ನು ಮಾಮರದಡಿಯಲ್ಲಿ ತಂಗಿದ ಎರಳೆಗಳು ನೋಡುತ್ತ ನಿಂತುಕೊಂಡಿವೆ. ಹೊಲಗದ್ದೆಗಳೆಲ್ಲ ತವಸಿಯಂತೆ ಕಾಷು ಮೌನ ತಳೆದಿವೆ. ಇಂತಹವರಲ್ಲಿ ಒಂದು ಕಡೆ ನಿಲ್ಲದೆ ಅತ್ತಿತ್ತ ನೋಡದೆ ಒಂದೇ ಗತಿಯಿಂದ ಹೆಜ್ಜೆಯಿಕ್ಕುತ್ತ ನೀರಲಗಿಯ ಪೂಲದ ಮೇಲೆ ಹುಡುಗ ನೊಬ್ಬ ಹೋಗುತ್ತಿದ್ದಾನೆ! ಯಾರಿವನು ?

ಪೂಲು ದಾಟಿದಾನೆ, ಲೈನದಾರಿಯನ್ನು ಬಿಟ್ಟು ಅಡ್ಡದಾರಿ ಯೊಂದನ್ನು ಹಿಡಿಯುತಾನೆ. ಹಿರೇಮಲ್ಲೂರ ಕಡೆಗೊ? ನೀರಲಗಿಯ ಕಡೆಗೊ? ಇನ್ನಷ್ಟು ಮುಂದಕ್ಕೆ ಬಂದು ಕವಲೊಡೆಯುವ ದಾರಿಯ ಹತ್ತಿರ ಬಂದರೆ ನಿರ್ದಿಷ್ಟವಾಗಿ ತಿಳಿಯುತ್ತದೆ. ಹೊರಳಿ ನೋಡಿದರೆ ಮುಖದ ಪರಿಚಯದ ಮೇಲಿಂದಲಾದರೂ ಗುರುತಿಸಲಿಕ್ಕಾದೀತು. ಆದರೆ ಅತ್ತಿತ್ತ ನೋಡಲಿ ಒಲ್ಲನಲ್ಲ! ಯಾವ ಊರ ಚದುರನಿವ? ತಿಳಿಯಲೇ ಒಲ್ಲದು!

ಕವಲು ದಾರಿ ಬಂದಿತು. ನೀರಲಗಿಯ ದಾರಿಯನ್ನು ಬಿಟ್ಟು ಹಿರೇಮಲ್ಲೂರ ದಾರಿಯನ್ನು ಹಿಡಿದನು. ಹೋ! ನಡಗೆಯ ಗುರುತು ಹತ್ತಿದಂತಾಗುತ್ತದೆ. ಅರ್ಧ ಚಣ್ಣ, ಅರ್ಧ ತೋಳಿನ ಅಂಗಿ, ತಲೆಯ ಮೇಲೊಂದು ಗಾಂಧೀ ಟೊಪ್ಪಿಗೆ! ಕೈಯಲ್ಲೊಂದು ಚೀಲ, ಅದರಲ್ಲಿ ಕೆಲವು ಪುಸ್ತಕ. ಛತ್ತರಿ ಇಲ್ಲ. ಬಿಸಿಲ ಹಣ್ಣನ್ನು ಸವಿಯಬಲ್ಲ ಸವಿಗಾರ. ಹಿರೇಮಲ್ಲೂರ ಹುಡುಗನೇನು ? ಹೌದೇನು ?

ಹೌದು, ಹಿರೇಮಲ್ಲೂರಿನ ಪೀರಣ್ಣ. ಮಜೀದ್ ಸಾಲೆಯ ವಿದ್ಯಾರ್ಥಿ. ಆರನೆಯ ವರ್ಗದಲ್ಲಿ ಓದುತ್ತಿದ್ದಾನೆ. ಅವ ನಮ್ಮ ಚಾಂದಬೀ ಮಗ.

ಚಾಂದಬೀಯನ್ನು ನಮ್ಮೂರಿನವರು ಚಂದವ್ವ, ಚಂದವ್ವ ಎಂದು ಕರೆಯುತ್ತಾರೆ. ಆಕೆ ಬಡವಿ. ಕೂಲಿ ಕುಂಬಳಿಯ ಮೇಲೆ ಜೀವನ ಸಾಗಿಸುವಳು. ಅವಳ ಬದುಕಿನ ಸಕಲ ಸಂಪತ್ತೆ ಪೀರಣ್ಣ. ಹೊಲದಲ್ಲಿ ಕರಿಕೆಯನ್ನು ಕಿತ್ತುವಾಗ, ಹತ್ತಿಯನ್ನು ಬಿಡಿಸುವಾಗ, ಕಣದ ಕಾಳು ತುಂಬಿಕೊಡುವಾಗ ಪೀರನನ್ನು ಕುರಿತು ಹಾಡುವಳು. ಮನೆಯಲ್ಲಿ ಬೀಸುವ ಕಲ್ಲ ಮುಂದೆ ಕುಳಿತು ಮುಕ್ಕು ಹಾಕುವಾಗ ಪೀರನ ಉಜ್ವಲ ಭವಿತವ್ಯವನ್ನು ಊಹಿಸಿ ಹಾಡುವಳು. ಏನಂತ, ಮಗ ಪೀರನನ್ನು ಕುರಿತು ತಾಯಿ ಕವನಿಸುವಳು?

ಹೋಳೀಗಿ ಮಾಡೇನ, ಗಾಳೀಗಿ ನಿಂತೇನು. ಸಾಲಿಯು ಸರದಾರ ಬರುವಾಗ ಮೋಜೀನ ಮಾಸ್ತರು ತಡೆದಾರs........!

ಆಡಾಕ ಹೋಗ್ಯಾನು, ಹುಡಿಯಾಗ ಮುಳಿಗ್ಯಾನು. ಆಡಿ ಬಂದವನ ಅಂಗಾಲು ತೆಂಗೀನ ನೀರಿಂದ ತೊಳದೇನ........!

ಸವಣೂರಿಗೆ ಹೋಗ್ಯಾನು. ನವಾಬರ ಕಂಡಾನು. ಗೆದ್ದು ಬಂದಾನಂಬ ಸಬುದ ಮಧ್ಯಾಣಕ ಬಂದು ಮುದ್ದು ಬಾಣಗಳ ಕಳುವೇನ....!

'ಏನs ಚಂದವ್ವ, ಪೀರ ಬಾಳ ಕಲಿತಾನವ್ವ. ಸವಣೂರ ದಿವಾನ ಆಗೂನವ್ವ ನಿನ್ಮಗ' ಎಂದು ಅವಳು ಬೀಸುವಾಗ ತಾಯಿಯೊಬ್ಬಳು ನಿಂತು ಪ್ರಶ್ನಿಸಿದರೆ ಚಂದವ್ವ ಮೆಲ್ಲಗೆ ನಗುವಳು. ಆ ನಗುವೇ ಹಾಗೆ ಪ್ರಶ್ನಿಸಿದ ತಾಯಿಗೆ ಸರಿಯಾದ ಉತ್ತರ. ಅಂತ ತಾಯಿಯ ಮಗ ಪೀರಣ್ಣ!

ತಾಯಿಯನ್ನು ಕಾಣಲೆಂದು ತವರೂರ ಕಡೆಗೆ ಮೊಗಮಾಡಿಕೊಂಡು ಹೊರಟ ಪೀರಣ್ಣನ ಮೊಗದಲ್ಲಿ ಗಾಂಭೀರ್ಯ, ನಡಗೆಯಲ್ಲಿ ಘನತೆ, ನೋಟದಲ್ಲಿ ಅಭಿಮಾನವಿದ್ದಿತು. 'ನಾನು ಅಲ್ಪ, ನಾನು ಬಡವ' ಎಂಬ ಮಾತು ವಿಶಾಲವಾದ ಅವನ ವಿಚಾರ ಜಗತ್ತಿನಲ್ಲಿ ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು ಹುಡುಕಿದರೂ ಒಂದಿಷ್ಟಾದರೂ ಸಿಗುವಂತಿರಲಿಲ್ಲ. ದಾರಿದ್ರ್ಯಕ್ಕೂ ಆತ್ಮಶ್ರೀಗೂ, ಬಡತನಕ್ಕೂ ಮನಸ್ಸಿನ ಉಚ್ಚ ಸಂಸ್ಕಾರಕ್ಕೂ, ಆಸೆಗೂ ತಪಸ್ಸಿಗೂ ಎಲ್ಲಿಯ ಸಂಬಂಧ, ಎಲ್ಲಿಯ ಸಾಟಿ!

ಹಿಂದಿನ ದಿನ ಹತ್ತಿಮತ್ತೂರು ರೈಲು ನಿಲುದಾಣದಲ್ಲಿ ನಡೆದ

ಘಟನೆಯನ್ನು ನೆನೆನೆನೆದುಕೊಂಡು ಪೀರಣ್ಣ ಹಿಗ್ಗುತ್ತಿದ್ದನು, ಅಭಿಮಾನ ದಿಂದ ಉಕ್ಕುತ್ತಿದ್ದನು. ಎಂತಲೇ ಹಿಂದಕ್ಕೂ ಮುಂದಕ್ಕೂ ಆತ ನೋಡು ತ್ತಲೆ ಇರಲಿಲ್ಲ. ಭಾವನೆಯ ಓಘ ತ್ವರಿತಗತಿಯಿಂದ ನಡೆದಂತೆ ಅವನ ಹೆಜ್ಜೆಗಳೂ ಅದೇ ಗತಿಯಿಂದ ಸಾಗಿದ್ದುವು. ಕಾಯ್ದು ನೆಲ, ಸುಡುವ ನೇಸರು, ಕೊರೆವ ಬಡತನ, ತಾಯಿ ಪಡುವ ಬನ್ನಬವಣೆಗಳು- ಅವೆಲ್ಲ ಪೀರಣ್ಣನ ಚಿತ್ತ ಸೂರ್ಯನಿದಿರು ನಿಲ್ಲದೆ ಎಲ್ಲಿಯೊ ತಲೆ ಮರಸಿಕೊಂಡು ಓಡಿಹೋಗಿದ್ದವು.

ಪೀರಣ್ಣ ಚಳವಳಿಯ ಮಂದಿಯೊಡನೆ ಹತ್ತಿಮತ್ತೂರು ರೈಲು ನಿಲುದಾಣದಲ್ಲಿ ಕೊಳ್ಳೆ ಹೊಡೆಯಲು ಸಜ್ಜಾಗಿ ನಿಂತಿದ್ದಾನೆ! ಮೂರು ತಾಸು ರಾತ್ರಿಯಾಗಿದೆ. ಇದೇ ಈಗ ಲೋಕಲ್ ಗಾಡಿ ಹೋಗಿದೆ. ಮಾಸ್ತರು, ಪೋರ್ಟರು ಇನ್ನೂ ರೈಲು ನಿಲುದಾಣದಲ್ಲಿಯೇ ಇದ್ದಾರೆ. ಈಗ ದಾಳಿ ಮಾಡಬೇಕು. ಮೂರು ಸುತ್ತಿನಿಂದ ಚಳವಳಿಯ ಮಂದಿ ಬಂದು ಸುತ್ತು ಹಾಕಬೇಕು. ಸಿಳ್ಳು ಹಾಕುವುದಷ್ಟೆ ತಡ. ನುಗ್ಗಿರಿ. ಮುನ್ನುಗ್ಗಿರಿ. ಮಾಸ್ತರರನ್ನು ಬಂಧಿಸಿರಿ. ಪೋರ್ಟರರನ್ನು ಕಟ್ಟಿರಿ. ಇವರು ಸಾಮ್ರಾಜ್ಯಶಾಹಿಯ ಬಂಡಿಯನ್ನು ನಾಡಿನಲ್ಲಿ ಸುತ್ತಿಸುವುದಕ್ಕೆ ನೆರವಾಗುವ ಜನ. ಟೆಲಿಫೋನ್ ಗಂಟೆಲು ಕತ್ತರಿಸಿರಿ. ಅದು ಸಾಮ್ರಾಜ್ಯವಾದಿಗಳ ಸಂದೇಶ ಕಳುಹಿಸುವುದಕ್ಕೆ ನೆರವಾಗುವ ಯಂತ್ರ. ಹಳಿ ಕೀಳಿರಿ. ಅವು ಗುಂಡು ಬಂದೂಕುಗಳನ್ನು ಹಿಡಿದುಕೊಂಡು ಸ್ವದೇಶಿ ಚಳವಳಿಯನ್ನು ಹತ್ತಿಕ್ಕುವುದಕ್ಕೆ ಹೋಗುವ ಸಿಪಾಯಿಗಳಿಗೆ ಸಹಾಯ್ಯಕಾರಿ ಯಾಗುತ್ತವೆ. ಸಿಳ್ಳು ಹೊಡೆಯುವುದಷ್ಟೇ ತಡ, ನುಗ್ಗಿರಿ, ಧಾವಿಸಿರಿ.

'ಸಿಳ್ಳು........ಹೂಂ........ನುಗ್ಗಿರಿ.

ಯಾರಲ್ಲಿ ? ಸ್ಟೇಶನ್ ಮಾಸ್ತರೇನು ?

ನನ್ನನ್ನು ಹೊಡೆಯಬೇಡಿರಿ. ಇಗೋ ಕೀಲಿಯ ಕೈ ಗೊಂಚಲು. ಅಲ್ಲಿ ಹಣವಿದೆ. ಅಲ್ಲಿ ಕ್ಯಾಬಿನ್ನಿದೆ. ಅಲ್ಲಿ ಟೆಲಿಫೋನಿದೆ.

ಮಾಸ್ತರೇ. ನಿಮ್ಮನ್ನು ಹೊಡೆಯಲು ಬಂದವರಲ್ಲ ನಾವು. ದುಃಖಿಗಳಿಗೆ ಸಮಾಧಾನ ಹೇಳಲು ಬಂದಿದ್ದೇವೆ. ಬಂಧಿತರನ್ನು ಮುಕ್ತ ಗೊಳಿಸಲು ನಾವು ಬಂದಿರುವೆವು.

ಹೂಂ ಕಟ್ಟಿರಿ ಇವರನ್ನು !

ಯಾರು ಪೋರ್ಟರೇನು ?

ಹೌದೌದು. ಇವರನ್ನು ಬಂಧಿಸಿರಿ.

ಅಲ್ಲಿ ಹಳಿ. ಇಲ್ಲಿ ಹಣ. ಅಲ್ಲಿ ಕ್ಯಾಬಿನ್........ಇದು ಕಛೇರಿ........ ಕೊಳ್ಳೆ ಹೊಡೆಯಿರಿ.

ಪೀರಣ್ಣನ ಕಣ್ಮುಂದೆ ರಾತ್ರಿಯೆಲ್ಲವೂ ಹತ್ತಿಮತ್ತೂರಿನಲ್ಲಿ ನಡೆದ ಹೋರಾಟದ ಚಿತ್ರವೆ ಚಿತ್ರ ! ಇದಿರಿನಲ್ಲಿ ಬೆಂಕಿಗೆ ಈಡಾಗಿ ಭುಗಿಲೆಂದು ಉರಿಯುವ ರೈಲು ನಿಲುದಾಣದ ನೋಟವೆ ನೋಟ. ಕಣ್ಣಿನಲ್ಲಿ ಅದೇ ಬೆಂಕಿ, ಅದೇ ಉರಿ !

ಇಂಗ್ಲೀಷರು ಇನ್ನು ಮೇಲೆ ಹೇಗೆ ಇಲ್ಲಿ ನಿಂತಾರು ! ಇಷ್ಟೆಲ್ಲ ಆದ ಮೇಲೆ ಅವರಿಗೆ ನಿಲ್ಲುವುದಕ್ಕೆ ಎಲ್ಲಿ ಸ್ಥಾನವಿದೆ ? ಈ ದೇಶದ ಬಡತನ ದುಃಖ ದಾರಿದ್ರ್ಯಗಳು ಅವರೊಂದಿಗೆ ಹೋಗುವವು. ನಾನಿನ್ನು ಮೇಲೆ ಬಡವನಲ್ಲ. ನಾನು ಅಲ್ಪನಲ್ಲ ! ಹಿಂದೂ ದೇಶದ ಬಂಧ ಮುಕ್ತತೆಗಾಗಿ ಹೋರಾಡಿದ ಸ್ವಾತಂತ್ರ್ಯವೀರ ! ಗುಲಾಮಗಿರಿಯ ಸರಪಳಿಯನ್ನು ಕಡಿದು ಹಾಕುವುದಕ್ಕೆ ಕಂಕಣ ಕಟ್ಟಿದ ಸಮರ ಸೇನಾನಿ........ !

ಪೀರಣ್ಣನ ಮನಸ್ಸು ಪಂಜರದಿಂದ ಹಾರಿಬಂದ ಹಕ್ಕಿಯಂತೆ ಗರಿಗೆದರಿ ಸ್ವಾತಂತ್ರ್ಯದಾಗಸದಲ್ಲಿ ಒಂದೇ ಸವನೆ ಹಾರಾಡುತ್ತಿತ್ತು. ಇನ್ನೂ ರೆಕ್ಕೆ ಬಲಿಯದ ಹಕ್ಕಿ ! ಬಹಳ ಹೊತ್ತಿನವರೆಗೆ ಹಾರಲಾರದು ! ಎಂತಲೇ ಅದು ಕೆಳಗೆ ಇಳಿದು ಬಂದಿತು. ಒಂದು ಕ್ಷಣದಲ್ಲಿ ಪೀರಣ್ಣನ ಮುಖ ಸಣ್ಣದಾಯಿತು.

'ಪೀರಣ್ಣ ? ಹೌದೇನು ?'

'ಹೌದರಿ'

'ಯಾಕಪ್ಪ ಪೀರಾ, ಮಟ ಮಟ ಮಧ್ಯಾಹ್ನದಾಗ ಹೊಂಟೆಲ್ಲ'

'ಮುಂದಿನವಾರಪರೀಕ್ಷೆ. ಫೀ ರೊಕ್ಕ ತರಾಕ ಹೊಂಟೇನರಿ'

'ಎಷ್ಟಪ್ಪ ಫೀ ರೊಕ್ಕ'

'ಆರು ತಿಂಗಳ ಫೀ ಬಾಕಿ ಹಂಗ ಅಯ್ತರಿ. ಎಲ್ಲಾ ಕೂಡಿ ಇಪ್ಪತ್ತೆರಡು ರೂಪಾಯಿ ಕೊಡಬೇಕಾಗೈತರಿ'

'ಚಂದಮ್ಮನಿಂದ ಅಷ್ಟೆಲ್ಲ ಕೊಡೂದು ಆದೀತೇನಪ್ಪ? ಪಾಪ.ಬಡವಿ' ಅವನದೇ ಪ್ರಶ್ನೆ. ಅವನವೇ ಉತ್ತರ. ಪೀರಣ್ಣಾನ ಮನಸ್ಸಿನಲ್ಲಿ ಸಂಕಟ ವಾಯಿತು. ಈ ಇಂಗ್ಲೀಷಿನ ಓದು ನನ್ನಂತಹರಿಗಲ್ಲ. ನನ್ನನ್ನು ಹಡೆದಂತಹ ತಾಯಿಗಲ್ಲ. ಇದು ಸಿರಿವಂತರ ಮಕ್ಕಳಿಗೆ, ಬಣಜಿಗರಿಗೆ, ಬ್ರಾಹ್ಮಣರಿಗೆ– ಅಲ್ಲ, ಉಳ್ಳವರಿಗೆ; ಇಲ್ಲದವರಿಗಲ್ಲ. ನಾನು ಬಡವ. ಮುಸಲ್ಮಾನ. ಹೊಲ ಮನೆಗಳಿಲ್ಲದ ನಿರ್ಗತಿಕ. ಅದಕ್ಕೇ ಹಿಂದೂದೇಶ ಬಂಧ ಮುಕ್ತವಾಗಬೇಕು. ಆದರೆ ಆಗ ಈ ಜಾತಿ ಪಂಗಡಗಳಿಲ್ಲ. ಈ ಬಡವ ಸಿರಿವಂತರೆಂಬ ಭೇದ ಭಾವನೆಗಳಿಲ್ಲ. ನನ್ನಂತಹರು ಆಗ ಓದಬಲ್ಲರು, ಕಲಿಯಬಲ್ಲರು, ತಾಯಿಯ ಹೆಮ್ಮೆಯ ಮಕ್ಕಳಾಗಬಲ್ಲರು.

'ಅವ್ವ, ಇಪ್ಪತ್ತೆರಡು ರೂಪಾಯಿ ಕೂಡಿಸಿ ಕೊಡಬಲ್ಲೆಯಾ?'

'ಏನು? ಇಪ್ಪತ್ತೆರಡು ರೂಪಾಯಿ..... ..? ತಾಯಿ........ಬಡವಿ.... ಮುದುಕಿ........?'

ಮುಲಕೀಪರೀಕ್ಷೆಯನ್ನು ಓದಿಸುವಾಗಲೆ 'ಅವಳ ಜೀವ ಹಣ್ಣಾ ಯಿತು. ಸಾಲೆಯ ಫೀ, ಪುಸ್ತಕಕ್ಕಾಗಿ ನಾಲೆಯ ಗುಡಿಯ ಸಾರಣೆ ಮಾಡಿದಳು. ಸರಸ್ವತಿಯ ಪೂಜೆಯಿದ್ದಾಗ ತೋರಣ ಕಟ್ಟಿದಳು. ಮಾಸ್ತರರು ನೆರವಾದರು. ನಾನು ತಾಯಿಯ ಪುಣ್ಯದಿಂದ, ಮಾಸ್ತರರ ನೆರವಿನಿಂದ ಮುಲಕೀ ಆದೆ. ಇಲ್ಲಿಯವರೆಗೂ ಓದಿದೆ. ಈಗ? ಇನ್ನು ಮುಂದೆ?

'ಪೀರಾ........'

'ಓ'

'ತಾಯಿಯನ್ನು ಕಾಡಬೇಡಪ್ಪ. ಅಲ್ಲೇ ಸವಣೂರಿನಲ್ಲಿ ಶ್ರೀಮಂತರಿ ದ್ದಾರೆ. ಅವರನ್ನು ಕಾಡಿಬೇಡು. ಇಲ್ಲಾ........'

'ಇಲ್ಲಾ ಅಂದರೆ....'

'ಚಳವಳಿ ಆದೆ. ಅವರನ್ನು ಕೂಡು. ದೇಶವನ್ನು ಬಂಧಮುಕ್ತ ಮಾಡು. ಇಲ್ಲಾ....'

'ಇಲ್ಲಾ ಅಂದರೆ....'

'ಸಾಲಿಯನ್ನು ಬಿಟ್ಟುಬಿಡು. ಇರುವೆಯಂತೆ ಉಳ್ಳವರ ಕಾಲಿನಡಿಯಲ್ಲಿ ಬಿದ್ದು ಪಟಪಟನೆ....'

ಪುನಃ ಪೀರಣ್ಣನ ಕಣ್ಣು ಕೆಂಪಗಾದವು. ಅವನ ಹೃದಯವೆಲ್ಲ ರೋಷದಿಂದೊಮ್ಮೆ ಸಂಕಟದಿಂದೊಮ್ಮೆ ತಪ್ತವಾಯಿತು.

ಊರು ಹತ್ತಿರ ಹತ್ತಿರ ಬರುತ್ತಿದ್ದಿತು. ತಾಯಿಯನ್ನು ಕಾಣಲೆಳಸಿದ ಅವನ ಮನಸ್ಸು ಸೌಮ್ಯವಾಗತೊಡಗಿತು. ಅವಳೇನು ಬೇಕಾದರೂ ಮಾಡಲಿ. ಆಕೆಯ ಇಷ್ಟವೆ ಇಷ್ಟ. ಇಂತ ಅಭಿಪ್ರಾಯಕ್ಕೆ ಬಂದು ಮುಟ್ಟಿದ ಪೀರಣ್ಣ ಈಗ ಮಾತ್ರ ಚಂದಮ್ಮನ ಮಗನಂತೆ ತೋರುತ್ತಿದ್ದನು.

ಮನೆಯ ಕಿರುವಾಗಿಲಲ್ಲಿ ನಿಂತು ಪೀರಣ್ಣ 'ಎವ್ವಾ' ಎಂದು ಕೂಗಿದನು. ತಾಯಿಯಿಂದ ಉತ್ತರವೆ ಬರಲಿಲ್ಲ.

ಚಳಿಯು ಅವಳನ್ನು ಹಾಸಿ ಹೊಚ್ಚಿ ಮಲಗಿಸಿದ್ದಿತು. ಮುದುಕಿ ಮೂರುದಿನ ಕೆಟ್ಟ ಬಿಸಿಲಿನಲ್ಲಿ ಕರಿಕೆ ಕಿತ್ತು ಬಂದಿದ್ದಿತು. ದುಡಿತದ ಬಾಧೆಯಲ್ಲಿ ಚಳಿಯು ಬಂದು ಅವಳನ್ನು ಕಟ್ಟಿ ಮಲಗಿಸಿ ಬಿಟ್ಟಿತ್ತು.

ಮುದ್ದೆ ಮುದ್ದೆಯಾಗಿ ಮಲಗಿಕೊಂಡ ಅವ್ವನನ್ನು ನೋಡಿ ಮಗನ ಜೀವ ತಣ್ಣಗಾಯಿತು. ತಾಯ ಕಣ್ಣು ತಪ್ಪಿಸಿ ಬಂದು ಹಿಂಬಾಗಿಲಲ್ಲಿ ನಿಂತು ಪೀರಣ್ಣ ಬಿಕ್ಕಿ ಬಿಕ್ಕಿ ಅತ್ತನು. ಅದೆಲ್ಲ ಸರಿ. ಆದರೆ ಬಡವರ ಕಣ್ಣೀರು ಯಾರು ಕೇಳುತ್ತಾರೆ?

* * *

ಕಳಸದಿಂದ ಹೊರಟ ಮಾಸ್ತರರು ಸಿದ್ದನ ಗುಡ್ಡ ಇಳಿದು ಬಂದರು. ಮುದ್ದಪ್ಪನವರ ಹೊಲದಲ್ಲಿ ಕುಸುಬೆಯನ್ನು ಬಡಿಯುತ್ತಿರುವುದನ್ನು ಕಂಡರು. ಕುಸುಬೆಗೆ ಈ ಬಾರಿ ರೋಗ ಬಂದಿತ್ತಂತೆ. ಹೇಗಿದೆಯೊ ನೋಡೋಣವೆಂದುಕೊಂಡು ಅತ್ತ ಕಡೆಗೆ ಅವರು ಬಂದರು.

ಕುಸುಬೆಯನ್ನು ಬಡಿಯುವ ಆಳೊಂದು ಮೇಲಕ್ಕೆದ್ದಿತು. ಆಳುಗಳಲ್ಲಿ ಕೆಲವರು ಗುಜು ಗುಜು ಎಂದು ತಮ್ಮೊಳಗೆ ಏನೇನೊ ಅಂದುಕೊಂಡರು ಇನ್ನು ಕೆಲವರು ನಕ್ಕರು.

'ಸಾಲೀ ಕಲಿತರೇನು, ಎಲ್ಲಾ ಬಂದಾಂಗ ಆಯಿತೇನು'

'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು'

'ಮ್ಯಾಟ್ರಿಕ್ ಆದರ ಕುಸುಬಿ ಬಡ್ತ್ಯಾಕ ಕಲಿತಂಗಾತೇನು'

'ವಿದ್ಯಾ ಕಲಿಯೂದು ಯಾರಿಗೆ ಆದು? ಸಿರಿವಂತರಿಗೆ. ಕೂಲೀ ಮಾಡುವರು ಕಲ್ಯಾಕ ಹತ್ತಿದರ ಅದ್ಧಿನ್ಯಾಂಗ ಬರಬೇಕು'

ತಮ್ಮಲ್ಲಿಯ ಒಬ್ಬ ಕೂಲಿಯವನನ್ನುದ್ದೇಶಿಸಿ ಇನ್ನುಳಿದವರು ನುಡಿವ ಬಿರುನುಡಿಗಳಿವು. ಕೂಲಿಯವರನ್ನು ಕಂಡರೆ ಕೂಲಿಯವರಿಗೆ ಆಗುವುದಿಲ್ಲ. ಸಿರಿವಂತನನ್ನು ಕಂಡರೆ ಸಿರಿವಂತನಿಗಾಗುವುದಿಲ್ಲ. ಸಾಹಿತಿಯನ್ನು ಸಾಹಿತಿ ಸೇರುವುದಿಲ್ಲ ಹಾಗೆ ಆಗದೆ ಇದ್ದ ಪಕ್ಷದಲ್ಲಿ ಲೋಕ ಕೃತಾರ್ಥತೆಯನ್ನು ಹೊಂದುವದೆಂಬ ಮಾತನ್ನು ಹಿಂದೊಮ್ಮೆ ತನ್ನ ಕಾಲದಲ್ಲಿ ಕಷ್ಟಪಟ್ಟ ಕನ್ನಡದ ಕವಿಯೊಬ್ಬನು ಹೇಳಿದುದೇ ನಿಜ!

ಬನಶಂಕರಿಯ ತಂಡೆಯೂ ಹತ್ತಿರವೆ ಬಂದರು. ಮಾಸ್ತರರು ಬಂದುದನ್ನು ಕಂಡು ಕೂಲಿಯವನೊಬ್ಬನು ಮೇಲಕ್ಕೆದ್ದ ದಾರಿದ್ರ್ಯದ ದುಃಖದಿಂದ ಕವಿದ ತನ್ನ ಮುಖವನ್ನು ಕೆಳಗೆ ಮಾಡಿಕೊಂಡು ನಿಂತನು.

'ಪೀರಣ್ಣಾ........'

ಮಾಸ್ತರರು ಕರೆದರೂ ಪೀರಣ್ಣ 'ಓ' ಯೆನ್ನದೆ ಸುಮ್ಮನೆ ನಿಂತು ಬಿಟ್ಟನು. ದುಃಖದಾಳದಿಂದ ಕೊಸರಿಕೊಂಡು ಮೇಲಕ್ಕೆದ್ದು ಬರುವುದಕ್ಕೆ ಅವನ ಧ್ವನಿಗೆ ಶಕ್ತಿಯೆ ಸಾಲದಾಗಿದ್ದಿತು.

'ಯಾಕೆ? ನಾಲಿ ಏನಾಯಿತು?'

ಮಾಸ್ತರರು ತಮ್ಮ ಪ್ರಶ್ನೆಯಿಂದ ಪೀರಣ್ಣನಿಗೆ ಇನ್ನೂ ಒಂದು ತೆರನಾದ ಧರ್ಮಸಂಕಟವನ್ನೊಡ್ಡಿದರು. ಸಾಲೆ ಸುರುವಿದ್ದಿತು. ನಾಳೆ ಸೋಮವಾರ ಪರೀಕ್ಷೆ. ಆದರೆ ಪರೀಕ್ಷೆಗೆ ಕಟ್ಟಬೇಕಾದ ಹಣ?

ಚಂದಮ್ಮ ಎಲ್ಲಿಂದ ಕೊಡುತ್ತಾಳೆ? ಕಳೆದ ನಾಲ್ಕು ದಿನಗಳಿಂದ ಅವಳಿಗೆ ಚಳಿಜ್ವರ. ಹಿಡಿದ ಹಾಸುಗೆ ಬಿಟ್ಟು ವೇಲಕ್ಕೆದ್ದಿಲ್ಲ ಮುದುಕಿ. ಕಡಕೊಟ್ಟ ಜೋಳವೂ ಹೊತ್ತಿಗೆ ಒದಗಿ ಬಂದಿಲ್ಲ. ಸೋಮವಾರದ ಪರೀಕ್ಷೆಯ ಚಿಂತೆಯನ್ನು ಬಿಟ್ಟು ಆದಿತ್ಯವಾರದ ಹಿಟ್ಟಿಗಾಗಿ ಪೀರಣ್ಣ ಇಂದು ದುಡಿಯಲು ಬಂದಿದ್ದಾನೆ!

ಗೌಡರು ಇದಿರಿಗೆ ಕುಳಿತುಕೊಂಡಿದ್ದಾರೆ. ಆಳುಮಕ್ಕಳು ಪೀರಣ್ಣನನ್ನು ತಮ್ಮೊಂದಿಗೆ ಸೇರಿಸಿಕೊಂಡು ಗೌಡರಿಗೆ ದುಡಿಮೆಯನ್ನು ಸಲ್ಲಿಸುತ್ತಿದ್ದಾರೆ. ಪೀರಣ್ಣನಿಗೆ ಕುಸುಬೆಯನ್ನು ಬಡಿಯಲಿಕ್ಕೆ ಬರಲೊಲ್ಲದು. ಕೈ ತುಂಬ ಮುಳ್ಳು. ಮುಳ್ಳು ತೆಗೆಯಲು ಹತ್ತಿದರೆ ರೈತರು ಖೊಳ್ಳೆಂದು ನಗುವರು. ಗೌಡರ ಮಕ್ಕಳೇ ಓದು ಕಲಿಯದ ಹೊತ್ತಿನಲ್ಲಿ ಕೂಲಿ ಯಾಕೆಯ ಮಗನಿಗೆಲ್ಲಿಂದ ವಿದ್ಯೆ! ಸಿರಿವಂತಿಕೆಯನ್ನೆ ಸರಸ್ವತಿ ಕೈ ಹಿಡಿಯದ ಹೊತ್ತಿನಲ್ಲಿ ಬಡವನ ಲಕ್ಷ್ಯ ಆಕೆಗೆಲ್ಲಿಂದ ಬಾ ಅಂದರೆ ಬರಬೇಕು? ಕೂಲಿಯವರಿಂತು ಯೋಚಿಸುತ್ತ ಪೀರಣ್ಣನ ಕನಿಕರ ಸ್ಥಿತಿಯನ್ನು ಕಂಡು ನಗುತ್ತಿದ್ದರು. ಗೌಡರು ಅವರ ನಗೆಗೆ ಬಹು ಗಾಂಭೀರ್ಯದಿಂದ ಸಮ್ಮತಿ ಕೊಡುತ್ತಿದ್ದರು.

'ಎಂಟು ತೊಲಿ ಬೆಳ್ಳಿಯನ್ನು ಅಡವಿಟ್ಟುಕೊಂಡು ಹಣಕೊಡಲು ಗೌಡರು ಒಪ್ಪಿದ್ದಾರೆ. ಹೋಗು, ಇವತ್ತು ದುಡಿದು ಬಾ' ಎಂದು ತಾಯಿ ಮಗನಿಗೆ ಬುದ್ಧೀ ಹೇಳಿ ಕಳುಹಿಸಿದ್ದಳು. ಮುಂದೆ ಮುಂದೆ ಗೌಡರ ಕಮತಿಗರು ಹೊರಟಾಗ ಅವರ ಹಿಂದಿನಿಂದ ಪೀರಣ್ಣ ಬೆಟ್ಟದಲ್ಲಿ ತಾಯಿ ನಗಲಿದ ಕರುವಿನಂತೆ ಗೋಗರೆಯುತ್ತ ಬಂದುದು ಅವರಿಗೆ ಹೇಗೆ ತಿಳಿಯಬೇಕು?

ಮಾಸ್ತರರು ಮನೆಯ ಕಡೆಗೆ ಭಾರವಾದ ಹೃದಯದಿಂದ ಹೆಜ್ಜೆ ಯಿಕ್ಕುತ್ತ ನಡೆದಾಗ ದಾರಿಯಲ್ಲಿ ತಮ್ಮ ವಿದ್ಯಾರ್ಥಿಯ ಕಂಬನಿಗಳು ಉದುರಿ ಬಿದ್ದುದನ್ನು ಕಂಡರೊ ಏನೊ! ನೆಲದಲ್ಲಿ ಮೊಗವಿಟ್ಟು ಅವನ್ನೆಲ್ಲ ನೋಡುತ್ತ ಅವರು ಊರಿನತ್ತ ಸಾಗುತ್ತಿದ್ದರು.

ಜಾಲಿಯ ಮರದ ಹತ್ತಿರ ಬಂದಾಗ ಮಾಸ್ತರರಿಗೆ ತಮ್ಮ ಹಿಂದಿನಿಂದ ಯಾರೊ ಬರುವಂತೆ ತೋರಿತು. ಇದ್ದಕ್ಕಿದ್ದಂತೆಯೆ ಹೊರಳಿ ನೋಡಿದರು. ಪೀರಣ್ಣ ದುಃಖವನ್ನು ಗುಟುಕರಿಸುತ್ತ ಮಾಸ್ತರರ ಬಳಿ ನಿಂತು ಕಣ್ಣೀರು ಸುರಿಸತೊಡಗಿದನು. ಅವರಿಗೆ ಏನು ಹೇಳಬೇಕೆಂಬುದೂ ತೋರಲಿಲ್ಲ. ಕ್ಷಣ ಹೊತ್ತು ಅವರು ದಿಗ್ಭ್ರಾಂತರಾದರು.

ಮುಲಿಕಿ ಓದಿದ್ದಾನೆ. ಮುಂದಿನ ವರುಷ ಮ್ಯಾಟ್ರಿಕ್ ಆಗಲಿರುವ. ದೇವರ ಕೃಪೆಯಿದ್ದರೆ ಬಿ. ಎ. ಆಗಬಹುದು. ಹಿಂದೂ ದೇಶ ಸ್ವಾತಂತ್ರ್ಯದ

ಆಂದೋಲನ ಹೂಡಿದೆ. ಸ್ವತಂತ್ರ ಹಿಂದೂ ದೇಶನಲ್ಲಿ ಬಡವನೆ ಅಮಾತ್ಯ ನಾಗಬಹುದು. ಬಂಧಮುಕ್ತ ಭಾರತದಲ್ಲಿ ಪ್ರತಿಯೊಬ್ಬನ ವ್ಯಕ್ತಿತ್ವದ ವಿಕಸನಕ್ಕೂ ಇಂಬು ದೊರೆಯುವುದು. ಆ ಲೋಕದಲ್ಲಿ ಪೀರಣ್ಣನಂತಹರ ಆದರ್ಶ ಬದುಕು ಅರಳಿ ಕಂಪು ಬೀರಬಹುದಾಗಿವೆ. ಅವರೆ ಅಲ್ಲಿಯವರೆಗೆ ಈ ಜೀವ ಬದುಕಬೇಕು. ಈ ಹುವ್ವು ಅರಳಬೇಕು !

ಹಳ್ಳದ ದಂಡೆಯ ಮೇಲೆ ಸದ್ದಿಲ್ಲದೆ ಅರಳಿ ಸದ್ದಿಲ್ಲದೆ ಅಡಗುವ ಕುಸುಮಗಳೆಷ್ಟೊ !

ಮಾಸ್ತರರು ಚಿಂತಿಸುತ್ತ ಸುಮ್ಮನೆ ನಿಂತಿದ್ದರು. ಪೀರಣ್ಣ ಅವರ ಬಳಿ ಮಾರ್ಗದರ್ಶನಕ್ಕಾಗಿ ಹಂಬಲಿಸಿ ಹಾಗೆಯೆ ನಿಂತಿದ್ದನು !

'ನನಗೆ ಓಡಿಹೋಗಬೇಕೆಂದು ಅನ್ನಿಸುತ್ತಿದೆ.....'

'ಯಾರಾದರೂ ಹುಚ್ಚ ಅಂದಾರು'

'ನನಗೆ ಚಳವಳಿಯವರನ್ನು ಕೂಡಬೇಕೆಂದು ಅನ್ನಿಸುತ್ತಿದೆ'

'ಮೊದಲು ಓದು....'

ಮಾಸ್ತರರು ಪೀರಣ್ಣನನ್ನು ಸಂತೈಸಿ ಮನೆಗೆ ಕರೆದುಕೊಂಡು ನಡೆದರು. ಮಾಸ್ತರು ಮುಂದೆ; ಪೀರಣ್ಣ ಹಿಂದುಗಡೆ ಬರುತ್ತಿದ್ದನು. ಅವರಿಗೆ ತೀರಿಹೋದ ಅವರ ಮಗನ ನೆನಪೆ ಆಗುತ್ತಿತ್ತು. ಶಿವಣ್ಣನೂ ಪೀರಣ್ಣನೂ ಸಹಪಾಠಿಗಳು. 'ನನ್ನ ಮಗನು ಜೀವಿಸಿದ್ದರೆ ಅವನು ಹೀಗೆ ಕಷ್ಟಪಡುವುದನ್ನು ನೋಡುವುದಕ್ಕೆ ಆಗುತ್ತಿತ್ತೇ?' ಎಂಬ ವಿಚಾರ ಅವರ ಮನಸ್ಸಿನಲ್ಲಿ ಸುಳಿಯದೆ ಇರಲಿಲ್ಲ.

'ಪೀರಣ್ಣ, ನೀನು ಓದಬೇಕು' ಎಂದರು

'ಹೂಂ' ಎಂದು ಮಾಸ್ತರರಿಗೆ ಮಾತು ಕೊಟ್ಟನು.

ಮರುದಿನದ ಉದಯದಲ್ಲಿ ತಾಯಿಯ ಕೃಪೆಯನ್ನೂ, ಮಾಸ್ತರರ ಆಶೀರ್ವಾದವನ್ನೂ ಹೊತ್ತುಕೊಂಡು ಪೀರಣ್ಣ ಸವಣೂರಿಗೆ ಹೊರಟನು. ಮಾಸ್ತರರು ಹೆಮ್ಮೆಯಿಂದ ಅವನು ಹೋಗುವುದನ್ನು ನೋಡುತ್ತ ನಿಂತಲ್ಲಿಯೇ ನಿಂತಿದ್ದರು.

* * *

ಹತ್ತಿಮತ್ತೂರು ರೈಲು ನಿಲುದಾಣಕ್ಕೆ ಕೊಳ್ಳಿಹೊಡೆದ ಪ್ರಕರಣ

ಆಗಲೆ ಬಹುದೂರ ಹೋಗಿತ್ತು. ಸವಣೂರು ಸಂಸ್ಥಾನದಲ್ಲೆಲ್ಲ ಸುಗ್ರೀವಾಜ್ಞೆಯಾಯಿತ್ತು. ಅಲ್ಲಲ್ಲಿ ಬಂಧನಗಳು ಬಹು ಜೋರಿನಿಂದ ಸಾಗಿದ್ದವು.

ಮಜೀದ್ ಸಾಲೆಯ ವಿದ್ಯಾರ್ಥಿಯೊಬ್ಬನು ಪರೀಕ್ಷೆಯ ಫೀ ತುಂಬಿ ಸಾಲೆಯ ಹೊರಗಿನಿಂದ ಬರುತ್ತಿರುವಾಗಲೆ ಸಿಪಾಯಿಗಳು ಅವನನ್ನು ಬಂಧಿಸಿದರೆಂಬ ವಾರ್ತೆ ಕಣ್ಣು ಮುಚ್ಚಿ ಕಣ್ಣು ತೆರೆಯುವುದರಲ್ಲಿ ಊರ ತುಂಬೆಲ್ಲ ಹಬ್ಬಿತು.

ಸೋಮವಾರ ಸಾಲೆಯ ಪರೀಕ್ಷೆಗೆ ಆರಂಭ! ಆದರೆ ವಿದ್ಯಾರ್ಥಿಗಳೇ ಇಲ್ಲ. ಎಲ್ಲರೂ ಮುಷ್ಕರು ಹೂಡಿದ್ದರು.

ಪೀರಣ್ಣನನ್ನು ಪೋಲೀಸರು ಬಂಧಿಸಿದ್ದಾರೆ! ಸವಣೂರು ಮಜೀದ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಗಳ ಸಂಪು! ಹಿಂದೂದೇಶ ಬಂಧಮುಕ್ತವಾಗಲಿ. ಆಂಗ್ಲರು ಹೊರಗೆ ಹೊರಡಲಿ. ಚಳವಳಿಗೆ ವಿಜಯವಾಗಲಿ.

ಕೂಗಿನ ಮೇಲೆ ಕೂಗು. ಜೈಕಾರದ ಮೇಲೆ ಜೈಕಾರ. ಆ ಜಯಭೇರಿಯ ಪ್ರತಿಧ್ವನಿ ಅಲ್ಲಿ ಬಡಿದು ಇಲ್ಲಿ ಬಡಿದು ಹಿರೇಮಲ್ಲೂರಿಗೂ ಬಂದು ಮುಟ್ಟಿತು. ಕಳಸಕ್ಕೂ ಹೋಯಿತು.

ಮಾಸ್ತರರು ಹಿಂಡಲಗಿಯ ಸೆರೆಮನೆಯ ಕಡೆಗೆ ಕಣ್ಣು ತಿರುಗಿಸಿ ನೋಡಿದರು. ಚಳಿಯಿಂದ ಮೇಲಕ್ಕೇಳದ ಚಂದಮ್ಮ ಹಾಸುಗೆಯ ಮೇಲೊರಗಿಕೊಂಡು ಕಸಿವಿಸಿಪಡುತ್ತಾ 'ಪೀರಾ' 'ನನ್ನ ಕೂಸೇ' ಎಂದು ಹಂಬಲಿಸಿದಳು.

ಪೀರಣ್ಣನಿಗೆ ಮೂರು ತಿಂಗಳ ಸಶ್ರಮಶಿಕ್ಷೆ. ದೇಶದ್ರೋಹ ಮಾಡಿದ್ದಾನಂತೆ ಪೀರಣ್ಣ! ಶಿಕ್ಷೆಯನ್ನನುಭವಿಸದೆ ಗತ್ಯಂತರವೆ ಇಲ್ಲ!

ಕಳಸದಿಂದ ಓಡಿ ಬಂದು ಮಾಸ್ತರರು ಚಂದಮ್ಮನಿಗೆ ಬುದ್ಧೀ ಕೊಟ್ಟರು.

'ಅವನು ತಿರುಗಿ ಬರುತ್ತಾನೆ. ನೀನು ಕಳವಳ ಪಡಬೇಡ'

'ಎಬೆ ಮುದುಕಿ, ಅವನು ನಿನಗೆ ಕೀರ್ತಿ ತರುವ ಮಗ. ದುಃಖ ಮಾಡಬೇಡ.'

'ಚಂದವ್ವಾ ನಿನ್ನ ಪುಣ್ಯ! ದೇಶಕ್ಕಾಗಿ ಅವನು ಹೋಗಿದ್ದಾನೆ'

ಬಲ್ಲವರು ಆಕೆಗಿಂತು ತಿಳಿವಳಿಕೆ ಕೊಟ್ಟರು. ಆದರೆ ಚಂದಮ್ಮನಿಗೆ ಅದೆಲ್ಲ ತಿಳಿಯದು. ಮಗನಿಗೆ ಕಾರಾಗಾರವೇ? ಕೊಲೆಗಾರನಾದನೇ ಪೀರಾ? ಅಪರಾಧಿಯಾದನೆ ನನ್ನ ಮಗ? ಸೆರೆಮನೆಯ ವಾಸ! ಆ ಉಡುಪು, ಆ ದಂಡನೆ, ಆ ಶಿಕ್ಷೆ!

ಚಂದಮ್ಮನಿಗೆ ಸೆರೆಮನೆಯ ಬಗ್ಗೆ ಇದ್ದ ಅಭಿಪ್ರಾಯವೇ ಬೇರೆ. ಅಲ್ಲಿ ಯಾರೋ ಖೂನಿ ಮಾಡಿದವರನ್ನು, ಇಲ್ಲಿ ಯಾರೊ ಕಳವು ಸುಲಿಗೆ ಮಾಡಿದವರನ್ನು ಬಂಧಿಸಿ ಸೆರೆಮನೆಗೊ ಕಾಳಾಪಾಣಿಗೊ ಒಯ್ದ ಕತೆಯನ್ನವಳು ಕೇಳಿದ್ದಳು. ಅಂತ ಮಗನನ್ನು ಹಡೆಯುವುದಕ್ಕಿಂತ ಬಂಜೆಯಾಗಿರುವುದೇ ಮೇಲೆಂದು ಹೆಣ್ಣುಮಕ್ಕಳಾಡುವ ಮಾತನ್ನು ಆಕೆ ಎಲ್ಲಿಯೊ ಕೇಳಿದ್ದಳು.

'ಈಗ ತನ್ನ ಮಗ ಹಾಗಾದನೇ' ಎಂದು ರೋದಿಸುತ್ತಿದ್ದಾಗ ತಿಳಿದವರು ತಿಳಿವಳಿಕೆ ಹೇಳಿದರು. ಆಗಷ್ಟು ಅವಳಿಗೆ ಸಮಾಧಾನ ವಾಯಿತು.

'ಬರುತ್ತಾನಮ್ಮ, ಮೂರು ತಿಂಗಳ ಮೇಲೆ'

'ಮೂರು ತಿಂಗಳ ಮೇಲೆ ಬರುತಾನೇ ಪೀರಾ'

'ಹೂಂ ಚಂದಮ್ಮ'

ಚಂದಮ್ಮ 'ಹೂ' 'ಹೂಂ' ಎನ್ನುತ್ತ ಕೆಮ್ಮುತ್ತ ಮಲಗಿಕೊಂಡಳು. ಮಗ ಸೆರೆಮನೆಗೆ ಹೋದ ಸಂಗತಿಯನ್ನು ಕೇಳಿ ಆಕೆಗೆ ಹೃದ್ರೋಗ ಹಿಡಿದಂತಾಯಿತು.

ಆದರೂ ಮಾಸ್ತರರು ಹೋಗುತೊಮ್ಮೆ ಬರುತೊಮ್ಮೆ ಆಕೆಗೆ ತಿಳಿವಳಿಕೆ ಸಮಾಧಾನಗಳನ್ನು ಕೊಡುತ್ತಲೇ ಇದ್ದರು.

'ಇಂದಿಗೆ ಒಂದುವರೆ ತಿಂಗಳು ಉಳಿಯಿತು'

'ಇಂದಿಗೆ ತಿಂಗಳ ಮೇಲೆ ನಾಲ್ಕು ದಿನ ಉಳಿದವು'

'ಇಂದಿಗೆ ಪೀರ ಬರುವುದಕ್ಕೆ ಇಪ್ಪತ್ತೈದು ದಿನ ಬಾಕಿ'

ಮುದುಕಿ ದಿನ ಹಾಕುತ್ತಲಿದ್ದಿತು. ದಿನಗಳೆದಂತೆ ಮೇಲೇಳುವುದಕ್ಕೆ ಆಕೆಗೆ ಶಕ್ತಿಯೆ ಇಲ್ಲದಾಗುತ್ತ ನಡೆಯಿತು. ಮಗು ಸೆರೆಮನೆಯಿಂದ ಬೇಗ ಬರತಾನೆ. ಅವನು ತನ್ನ ತಾಯಿಗಾಗಿ ಅಲ್ಲಿಗೆ ಹೋಗಿರುವನಂತೆ.

ತಾಯಿಗಾಗಿ ಬೇಗ ತಿರುಗಿ ಬರತಾನೇನು? ನನ್ನ ವೀರಾ ನನಗಾಗಿ ಬರತಾನೇ? ಮುದುಕಿ ಬೈಗು ಬೆಳಗು ಹಾಸಿಗೆಯಲ್ಲಿ ಮಲಗಿಕೊಂಡೇ ಹಂಬಲಿಸುತ್ತಿತ್ತು.

'ಬರುತ್ತಾನೆ. ತಾಯಿಗೋಸುಗವೇ ಹೋಗಿದ್ದಾನೆ ಚಿಂತೆ ಬೇಡ ಚಂದಮ್ಮ,' ಮಾಸ್ತರೊ ಇನ್ನಾರೊ ಆಕೆಗೆ ಸಮಾಧಾನ ಹೇಳುವರು.

ಮಗ ಬರುವನೆಂಬ ಚಿಂತೆಯಲ್ಲಿ ಚಂದಮ್ಮ ಎರಡುವರೆ ತಿಂಗಳನ್ನು ನೀಗಿದಳು. ವೀರನನ್ನು ಕಂಡೇನೆಂಬಾಸೆಯೆ ಈ ಕಾಲದಲ್ಲಿ ಆಕೆಗೆ ಅಂತಶ್ಶಕ್ತಿ ಸಮಾಧಾನಗಳನ್ನು ತಂದೊದವಿತು. ನಂಬುಗೆ! ಅದೊಂದೆ ಮರಣ ಜೀವಿಗೆ ಅಮೃತ ಮಂತ್ರ!

ಚಂದಮ್ಮನ ಜೀವನವೆ ಅದಕ್ಕೊಂದು ದೃಷ್ಟಾಂತ!

* * *

ಹಿಂಡಲಗಿಯ ಸೆರೆಮನೆಯ ಮುಚ್ಚಂಜೆಯ ಹೊತ್ತು. ಗಡಿಯಾರ ಘಣ್ ಘಣ್ ಎಂದು ಆರು ಬಾರಿಸಿತು. ಕಾವಲುಗಾರರಲ್ಲಿ ಕೆಲವರು ಅದಲು ಬದಲಾಗುವ ಸಮಯ. ಸೆರೆಮನೆಯ ಆವರಣದ ಸುತ್ತು ಮುತ್ತಲಿನ ಗಿಡಗಳಲ್ಲಿ ಕರ್ವ್‌ಗುಡುತ್ತ ಬಂದು ಕುಳಿತುಕೊಂಡಿದ್ದ ಕಾಗೆಗಳು ಈಗ ಮೌನ ತಳೆದಿದ್ದವು.

ಸೆರೆಮನೆಯ ಖೈದಿಗಳದೇ ಒಂದು ಜಗತ್ತು. ಮಳಲಿನಲ್ಲಿ ನೀರು ತೋಡುವಂತಹ ಜೀವನ ಅವರದು. ಈಗವರು ಸಾಮೂಹಿಕ ಪ್ರಾರ್ಥನೆ ಮುಗಿಸಿದರು. ಇನ್ನು ಮೇಲೆ ಊಟ, ನಂತರ ಹರಟೆ. ಆ ಮೇಲೆ ನಿದ್ರೆಯ ಜಾವ. ಪುನಃ ನಸುಕಿನಲ್ಲಿ ಎದ್ದು ಭಜನೆ ಮಾಡುವುದಕ್ಕೆ ಏಳಬೇಕು. ದೈನಂದಿನ ಕಾರ್ಯಕ್ರಮಕ್ಕೆ ಅಲ್ಲಿಂದಲೇ ಪ್ರಾರಂಭ.

ಪ್ರಶಾಂತವಾದ ಮನಸ್ಸಿನಿಂದ ಪ್ರಕ್ಷುಬ್ಧವಾದ ವಾತಾವರಣವನ್ನು ರಾಜಕೀಯ ಖೈದಿಗಳು ಇದಿರುಗೊಳ್ಳುತ್ತಲಿರುವರು. ಆದರೆ ಅವರ ಮಧ್ಯದಲ್ಲಿ ನೆಲಸಿದ ಜೀವಿಯೊಂದರ ಮನಸ್ಸಿನಲ್ಲಿ ಏನು ಮಾಡಿದರೂ ನೆಮ್ಮದಿಯಿಲ್ಲ. ಭಜನೆಯ ಮಧ್ಯದಲ್ಲಿ ಅಳುವಿನ ಕರೆಯೆ ಅವನಿಗೆ ಕೇಳಿಸುತ್ತಿದೆ. ತಾಳದ ಸಪ್ಪಳದಲ್ಲಿ ರೋದನ ಸ್ವರವೆ ಕೇಳಿ ಬಂದಂತಾಗುತ್ತದೆ. ಊಟವಿಲ್ಲ. ನಿದ್ರೆಯಿಲ್ಲ. ಗಲ್ಲಕ್ಕೆ ಕೈ ಹಚ್ಚಿಕೊಂಡು

ಗಂಭೀರವಾದ ಚಿಂತನೆಯ ತೆಪ್ಪದಲ್ಲಿ ಕುಳಿತುಕೊಂಡು ಅವನು ತೇಲುತ್ತ ನಡೆದಿದ್ದಾನೆ ಅವನಿಗೆ ತಾಯ ನೆನಪಾಗುತ್ತಿದೆ. ನೆನಪಿನ ಒತ್ತಡದಿಂದ ಒಮ್ಮೊಮ್ಮೆ ಹೃದಯ ಸಿಡಿದು ಹೋದಂತಾಗುತ್ತದೆ. ಇದಿರಿನಲ್ಲಿ ತಾಯಿ ಮಲಗಿಕೊಂಡಿದ್ದಾಳೇನೋ! ಬೇನೆಗೊಂಡ ತಾಯ ಆರೈಕೆಯನ್ನು ಮಗನು ಮಾಡುತ್ತಿದ್ದಾನೇನೊ ! ಅವಳು ಮಗನ ಅಗಲುವಿಕೆಯಿಂದ ಕಸಿವಿಸಿ ಪಡುತ್ತಿದ್ದಾಳೇನೊ ! ತಾನು ಅವಳಿಗೆ ಸಾಂತ್ವನ ಹೇಳುತ್ತಿದ್ದಾನೇನೊ ! ಇದು ಪೀರಣ್ಣಾನ ಮನಸ್ಥಿತಿ. ಅದೇ ಕನಸಿನಲ್ಲಿ ಪೀರಣ್ಣಾ ನಿದ್ರೆ ಹೋದನು.

............ಅನಿರೀಕ್ಷಿತವಾಗಿ ಒಂದುವಾರ ಮೊದಲೆ ಬಿಡುಗಡೆಯಾಯಿತು. ಪೀರಣ್ಣಾ ತನ್ನ ಸೋದರ ಕಾರಾಗಾರ ನಿವಾಸಿಗಳಿಗೆ ನಮಸ್ಕಾರ ಹೇಳಿ ಭಾರವಾದ ಮನಸ್ಸಿನಿಂದ ಸೆರೆಮನೆಯ ಸಲಾಕೆಗಳಿಂದ ಹೊರಗೆ ಬಂದನು. ಬಂಧಿವಾಸಿಗಳು ತನ್ನನ್ನೇ ನಮ್ರ ದೃಷ್ಟಿಯಿಂದ ನೋಡುತ್ತಿದ್ದರು. 'ಪೀರಣ್ಣಾ ಒಳ್ಳೆಯ ಮನುಷ್ಯ. ನಮ್ಮಿಂದ ಅಗಲಿ ಹೋಗುತ್ತಿದ್ದಾನಲ್ಲ' ಎಂಬ ವ್ಯಥೆ ಅವರೆಲ್ಲರ ಮೊಗದ ಮೇಲೆ. ಅದರಿಂದ ಪೀರಣ್ಣಾನಿಗೂ ನೋವು. 'ದೇಶದ ಆ ಮೂಲೆ ಈ ಮೂಲೆಯಿಂದ ಹಿಡಿದು ತಂದು ಅಗಲಿದ ಸೋದರರನ್ನು ಸರಕಾರ ಒಂದು ಗೂಡಿಸಿ ಪುಣ್ಯ ಕಟ್ಟಿಕೊಂಡಿತು. ಇಂಥ ಬಂಧುಗಳ ಸಹವಾಸ ಇನ್ನೆಂದಿಗೊ' ಎಂಬ ನೋವು ಅವನಿಗೆ. ಆದರೆ ಬಿಡುಗಡೆ ಬಂಧನ! ಇದು ಸೃಷ್ಟಿಯ ನಿಯಮವಷ್ಟೇ !

ಅವರಿಗೆಲ್ಲ ನಮಸ್ಕಾರ ಹೇಳಿ ಸೆರೆಮನೆಯನ್ನು ದಾಟಿ ಹೊರಗೆ ಬರುತ್ತಲೆ ಪೀರಣ್ಣಾನ ಮನಸ್ಸು ಒಮ್ಮೆಲೆ ತಾಯ ಕಡೆಗೆ ಹೊರಳಿತು. ಅಂದು ಸೆರೆ ಮನೆಯಲ್ಲಿ ರಾಜಕಾರಣಿಗಳೆಲ್ಲ ಕೂಡಿಕೊಂಡು ಮುಂದಿನ ಕಾರ್ಯಕ್ರಮವನ್ನು ಕುರಿತು ಚರ್ಚಿಸಿದುದೆಲ್ಲ ಎಲ್ಲಿ ಹೋಯಿತೋ ! ನಾಡಿನ ಭವಿತವ್ಯವನ್ನು,ಹೋರಾಟದ ಸ್ವರೂಪವನ್ನು ಕುರಿತು ಆಳವಾಗಿ ಯೋಚಿಸಿದ ಅಂದಿನ ರೂಪ ರೇಷೆಗಳೆಲ್ಲ ಎಲ್ಲಿ ಮಾಯವಾದವೊ ! ಪೀರಣ್ಣಾನ ಮನಸ್ಸಿನಿಂದ ಅವೆಲ್ಲ ತೊಲಗಿ ಹೋಗಿ ಅವನ ಕಣ್ಣೆದಿರು ತಾಯಮ್ಮನ ಚಿತ್ರವೊಂದು ಬಂದು ನಿಂತಿತು.

ಹಲ್ಲುಗಳು ಬಿದ್ದು ಹೋಗಿವೆ. ಹಾಸುಗೆಗೆ ದೇಹವೆಲ್ಲ ಅಂಟಿಕೊಂಡು ಬಿಟ್ಟಿದೆ. ತಾಯವ್ವ ಬರೀ ಎಲುವಿನ ಹಂದರ! ಕರಿಕೆ ಕಳೆ ಕಿತ್ತಿದ ಆ ಕೈಗಳಲ್ಲಿ ಇಂದು ಹಿಂಡಿ ತೆಗೆದೇನೆಂದರೆ ಒಂದು ಹನಿ ರಕ್ತ ಕೂಡ ಇಲ್ಲ. ವೈದ್ಯರೇ ಈ ತಾಯಿಯ ಗತಿ ಏನು? ನನ್ನ ಅವ್ವನ ಗತಿ ಏನು?

ಏನಿಲ್ಲ. ಆಕೆ ಒಂದು ವಾರದ ಹಿಂದೇ ಹೋಗಬೇಕಿತ್ತು. ಆದರೆ ಏಳು ದಿನ ಮುಂದೆ ಹಾಕಿದುದೇ ಆಶ್ಚರ್ಯ! ಯಾವ ಅಂತಶ್ಯಕ್ತಿಯೋ ಇನ್ನಾವ ಆಸೆ ಪ್ರೇರಣೆಗಳೋ ಶಿವನೇ ಬಲ್ಲ!

'ಅವ್ವಾ, ಬಂದಿದ್ದೇನೆ........' ಪೀರಣ್ಣ ತಾಯಿಯ ಮೇಲೆ ಬಿದ್ದು ರೋದಿಸತೊಡಗಿದನು. ಅವನೆಷ್ಟು ಚೀರಿದರೂ ಆಕೆಗೆ ಗುರುತು ಹತ್ತಲೊಲ್ಲದು. ಅವಳಿಗೆ ಅವಳದೇ ಸಂಕಟ. ಬಂಧನದಿಂದ ಪಾರಾಗಿ ಬಿಡುಗಡೆಯ ಸೀಮೆಯನ್ನು ಸೇರುವ ಹೋರಾಟದಲ್ಲಿಯೇ ಅವಳು ತೊಡಗಿದ್ದಾಳೆ. ಮಗನ ಹಂಬಲ ಅವಳಿಗಿಲ್ಲ.

'ಅವ್ವಾ, ಪೀರ ಬಂದಿದ್ದೇನೆ. ದೇಶ ಸೇವೆಯನ್ನು ಮಾಡಿ ಬಂದ ಮಗ ನಿನ್ನ ಕಾಲ ಬಳಿ ಬಂದು ಕುಳಿತಿದ್ದೇನೆ........' ಪೀರಣ್ಣನ ಕೂಗು ಚಂದವ್ವನಿಗೆ ಕೇಳಿಸಲೇ ಇಲ್ಲ.

'ಪೀರಣ್ಣಾ, ಹೋಗುವ ತಾಯಿಯನ್ನು ಕಷ್ಟ ಪಡಿಸಬೇಡ ಹೋಗಲಿ. ಸಮಾಧಾನದಿಂದ ಅವಳನ್ನು ಬೀಳ್ಕೊಡು. ಇನ್ನು ಮೇಲೆ ಅವಳಿಗೆ ಕಷ್ಟವಿಲ್ಲ. ನೀನು ತಾಯಿಗೆ ಬಯಸಿದ ಮುಕ್ತಿಯನ್ನೇ ಅವಳು ಪಡೆಯುತ್ತಿದ್ದಾಳೆ .......' ಮಾಸ್ತರರ ಸಮಾಧಾನ. ಆದರೂ ಪೀರಣ್ಣನಿಗೆ ಹೇಳಲಾರದ ದುಃಖ. ತಾಯಿಯನ್ನು ತಬ್ಬಿಕೊಂಡು ಅಳುವುದನ್ನೇ ಬಿಡಲೊಲ್ಲನು.

'ಅವ್ವಾ, ನಿನ್ನ ಮಗ ಬಂದಿದ್ದೇನೆ. ನಿನ್ನ ಕೂಸು ಪೀರಾ........' ಪೀರಣ್ಣ ಚೀರಿ ಚೀರಿ ಅಳತೊಡಗಿದನು. ತಾಯಿ ಮಾತನಾಡುವಂತೆ ಅವನಿಗನ್ನಿಸಿತು. ಕೈ ಮೇಲಕ್ಕೆತ್ತಿದಳು. ಪೀರಣ್ಣನಿಗೆ ಸಮಾಧಾನ ಆದಂತಾಯಿತು. ಅವಳು ತನ್ನನ್ನೇ ಕರೆಯುತ್ತಿದ್ದಾಳೆಂದು ಅವನಿಗೆ ಅನ್ನಿಸಿತು. ಆದರೆ ತಾಯ ಕೈಗಳು ಅವನಿಗಾಗಿರಲಿಲ್ಲ. ಅವು ಅವಳನ್ನು ಕರೆಯ ಬಂದವರ ಕಡೆಗೆ ಒಲಿದಿದ್ದವು.

ತಾಯಿ ಬಾಯಿ ಬಿಡತೊಡಗಿದಳು. ಎಂತದೋ ಸ್ವರದಲ್ಲಿ ಯಾವುದೋ ಭಾಷೆಯಲ್ಲಿ ಅವಳು ಮಾತನಾಡುವಂತೆ ತೋರುತ್ತಿದ್ದಿತು. ಪೀರಣ್ಣನಿಗೆ ಅದು 'ಮಗೂ ಬಂದೆಯಾ' ಎನ್ನಿಸುವಂತೆ ಅಭಿಪ್ರಾಯವಾಗುತ್ತಿದ್ದಿತು.

ಕೊನೆಯ ಜಾವ. ಚಂದಮ್ಮ ಸಂಕಟದಿಂದ ಒದ್ದಾಡತೊಡಗಿದಳು. ಯಾರೂ ಅದನ್ನು ನೋಡುವುದಕ್ಕೆ ಹತ್ತಿರ ಇರಬಾರದು ! ಅಂತ ನೋವಿನ ನೋಟ ಅದು.

'ಪೀರಾ, ಬಂದಿಯೇನು?' ಎಂದಳು.

'ಅವ್ವಾ, ಬಂದಿದ್ದೇನೆ........' ಎಂದು ಪೀರಣ್ಣ ಅವಳ ಕಿವಿಯ ಹತ್ತಿರ ಮೊಗವಿಟ್ಟು ನುಡಿದನು ಇನ್ನು ತಾಯಿ ಏನಾದರೂ ಹೇಳುತ್ತಾಳೆಂದು ಪೀರಾ ನಂಬಿದನು. ಆದರೆ ತಾಯಿ ಮಗನನ್ನು ವಂಚಿಸಿ ಹೋದಳು. ತಿರುಗದ ದಾರಿ ಹಿಡಿದು ಮಗನನ್ನು ಹಿಂದೆ ದೂರ ದೂರ ಬಿಟ್ಟು ಮುಂದು ಮುಂದಕ್ಕೆ ಹೋದಳು.

'ಅವ್ವಾ' ಎಂದು ಪೀರಣ್ಣ ಕೂಗಿದ. ಕಂಬನಿಗರೆದ.......... ........ ಇದೆಲ್ಲ ಸೆರೆಮನೆಯಲ್ಲಿ ಪೀರ ಕಂಡ ಕನಸು. ಕನಸು ಮುಗಿದು ನಿದ್ರೆ ತಿಳಿದು ಅವನು ಎದ್ದು ಕುಳಿತನು. ಅವನ ಮನಸ್ಸು ಉಕ್ಕಿ ಬರುವ ಸಮುದ್ರದ ತೆರೆಗಳೆದಿರಿಗೆ ಸಿಕ್ಕ ತರಗೆಲೆಯಂತಾಗಿ ಹೋಗಿತ್ತು.

ಪೀರಣ್ಣನ ಮನಸ್ಸನ್ನು, ಅವನ ಹೃದಯದ ಭಾರವನ್ನು ಕಾಲವೇನು ಗಮನಿಸುತ್ತದೆಯೆ? ಅದು ಬರುವಂತೆ ಬಂದಿತು. ಸಾಗುವಂತೆ ಸಾಗಿತು.

ನಾಳೆ ಇಪ್ಪತ್ತನಾಲ್ಕನೆಯ ನಂಬರಿನ ಖೈದಿಯ ಬಿಡುಗಡೆ. ಹೆಸರು ಪೀರಾಸಾಹೇಬ. ಹಿರೇಮಲ್ಲೂರಿನವ. ಮಜೀದ ಸಾಲೆಯ ವಿದ್ಯಾರ್ಥಿ. ಹತ್ತಿಮತ್ತೂರು ರೈಲು ನಿಲ್ದಾಣದ ಕೊಳ್ಳೆಯ ವಿಚಾರಣೆಯಲ್ಲಿ ಸಿಲುಕಿ ಮೂರು ತಿಂಗಳ ಸಶ್ರಮ ಶಿಕ್ಷೆ ವಹಿಸಿದವನಿಗೆ ಬಿಡುಗಡೆ !

ತಡೆದು ತಡೆದು ಅರುಣೋದಯವಾಯಿತು. ಖೈದಿಯು ತನ್ನ ಬಟ್ಟೆ ಬರೆಗಳನ್ನು ಕಟ್ಟಿಕೊಂಡು ಸೋದರ ಕಾರಾಗಾರ ನಿವಾಸಿಗಳಿಗೆ ನಮಸ್ಕಾರ ಮಾಡಿ ಸೆರೆಮನೆಯ ದ್ವಾರ ಬಾಗಿಲನ್ನು ದಾಟಿ ಹೊರಗೆ

ಬಂದು ನಿಂತು ತುಸು ಹಿಂದಕ್ಕೆ ನೋಡಿದನು! ಸೆರೆಮನೆಯನ್ನು ಈ ಮೊದಲು ಎಲ್ಲಿಯಾದರೂ ಕಂಡಿದ್ದೇನೆಯೆ ಎನ್ನುವಂತಹ ವಿಚಿತ್ರ ನೆನಪೊಂದು ಪೀರಣ್ಣನಿಗಾಯಿತು.

ಅದೇ ಸ್ಮರಣೆಯಲ್ಲಿ ಗಾಡಿಯೇರಿ ಕುಳಿತು ಹುಬ್ಬಳ್ಳಿಗೆ ಬಂದನು. ಅಲ್ಲಿಂದ ಮೋಟರು ಹಿಡಿದು ಶಿಗ್ಗಾವಿಗೆ ಬಂದಿಳಿದನು. ಯಾರೊಬ್ಬರೂ ಪೀರಣ್ಣನ ಗುರುತು ಹಿಡಿಯಲೊಲ್ಲರು. ತಾನು ಯಾವ ದೇಶದಿಂದ ಯಾವ ದೇಶಕ್ಕೆ ಬಂದೆನೆಂದು ಅಂದುಕೊಳ್ಳುವಷ್ಟು ದಿಗ್ಭ್ರಮೆ ಆವನಿಗಾದಂತಾಯಿತು. ಹಾಗಾಗುವುದಕ್ಕೆ ಕಾರಣ ಅವನ ಮನಸ್ಸನ್ನು ಮುಂದೆ ಬಂದು ನಿಂತಿದ್ದ ಯಾವುದೋ ವಾರ್ತೆಯೊಂದು ಕದಲಿಸಿದ್ದಿತು.

ತಮ್ಮ ವಿದ್ಯಾರ್ಥಿ ಬರುವ ದಿನ ಮಾಸ್ತರರಿಗೆ ತಿಳಿದಿದ್ದಿತು. ಅವರು ಊರ ಹೊರಗೆ ಕಾಯ್ದು ಕುಳಿತುಕೊಂಡಿದ್ದರು. ಕೈಯಲ್ಲೊಂದು ಚೀಲ, ಹೆಗಲ ಮೇಲೆ ಹಾಸುಗೆಯ ಗಂಟು ಹಿಡಿದುಕೊಂಡು ಬರುವ ತಮ್ಮ ವಿದ್ಯಾರ್ಥಿಯನ್ನು ಮಾಸ್ತರರು ದೂರದಿಂದಲೇ ನೋಡಿದರು. ಪೀರಣ್ಣ ಹತ್ತಿರ ಹತ್ತಿರ ಬಂದ ಹನಿಗಣ್ಣಿನಿಂದಲೇ ಬಂದನು.

‘ಮಾಸ್ತರೇ, ಅವ್ವ........’

‘ಪೀರಣ್ಣ, ಒಂದುವಾರ ತಡವಾಯಿತು’

‘ಅವ್ವನಿಗಾಗಿ........’

‘ಹೌದು. ನಿನ್ನ ತಾಯಿ ಅಮರಳಾಗಿದ್ದಾಳೆ. ನೀನು ಸನ್ಮಾತೆಯ ಸತ್ಪುತ್ರ. ಶೋಕಿಸ ಬೇಡ ಪೀರಾ........’

‘ತಾಯಿಗಾಗಿ ಅಪರಾಧ ಮಾಡಿದೆನೇ........’

‘ಹುಚ್ಚ, ನಿನ್ನ ತಾಯಿ ಅಮೃತಮಾತೆ’

ಗುರು ಶಿಷ್ಯರ ಸಮಾಧಾನದ ಈ ಮಾತು ಕತೆಯನ್ನು ಆ ಭೂಮಿ ಮೈಯೆಲ್ಲ ಕಿವಿ ಮಾಡಿ ಕೇಳುತ್ತಲಿದ್ದಿತು. ತರು ಮರಾದಿಗಳು ನಿಶ್ಚಲವಾಂತು ಅವರೆಡೆಗೆ ನೋಡುತ್ತಿದ್ದವು. ಹಕ್ಕಿ ಪಕ್ಕಿಗಳು ಹಾಡುವುದನ್ನು ನಿಲ್ಲಿಸಿ ತದೇಕ ಚಿತ್ತದಿಂದ ಕಿವಿಗೊಟ್ಟಿದ್ದವು; ಅಂತಹ ಸನ್ನಿವೇಶ ಹಗಲೆಲ್ಲ ಬರುವುದಿಲ್ಲ. ನೆಲದ ಪುಣ್ಯದಿಂದ ಅವು ಎಂದಾದರೊಮ್ಮೆ ಬರುತ್ತವೆಯೆಂದು ಅವೆಲ್ಲ ತಿಳಿದಿದ್ದವು!

# ಜೀತಗಾರ ಮೂಕಾ!

'ಈದ' ಹಬ್ಬದ ಮುಂಜಾವು. ನಮ್ಮ ಮನೆಯ ಕಟ್ಟೆಯ ಮೇಲೆ ಒಬ್ಬನೇ ಕುಳಿತುಕೊಂಡಿದ್ದೆ. ಹೃದಯ ಭಾರವಾಗಿದ್ದಿತು. ಮನಸ್ಸು ಚಿಂತಾಮಗ್ನವಾಗಿದ್ದಿತು.

ದೇಶದ ಮೂಲೆ ಮೂಲೆಗಳಿಂದ 'ಈದ' ಸಂದೇಶಗಳು ಬೈಗಿನಿಂದ ಬೆಳಗಿನವರೆಗೆ ಬಂದೇ ಬರುತ್ತಿದ್ದವು. ಧರ್ಮದ ಹೆಸರಿನಲ್ಲಿ, ಮಾನವತೆಯ ಹೆಸರಿನಲ್ಲಿ ಅವರಿಂದ ಇವರಿಗೆ ಸಂದೇಶ, ಇವರಿಂದ ಅವರಿಗೆ ಕೃತಜ್ಞತೆ, —'ಹೇ, ಮುಸಲ್ಮಾನ ಬಾಂಧವಾ, ಹೇ, ಹಿಂದೂ ಸಹೋದರಾ' ಎಂಬ ಸಂಬೋಧನೆಯಿಂದ ಮೊದಲ್ಗೊಂಡ ಹಾರಯಿಕೆಗಳು ನಾಡಿನ ಎಲ್ಲೆದೆಸೆ ಗಳಿಂದ ಸಾಗಿ ಸಾಗಿ ಬರುತ್ತಿದ್ದವು.

ನಾನು ಕುಳಿತಲ್ಲಿಯೇ ಕುಳಿತು ಆ ಹಾರಯಿಕೆಗಳನ್ನು ನೆನೆ ಯುತ್ತಲಿದ್ದೆ. ಮನಸ್ಸಿನಲ್ಲಿ 'ಈದ' ಹಬ್ಬದ ಗೌರವದ ದೆಸೆಯಿಂದಲೊ ಎಂಬಂತೆ ಕತೆಯೊಂದು ತನ್ನಷ್ಟಕ್ಕೆ ತಾನು ಕಟ್ಟಿಕೊಳ್ಳುತ್ತಲಿತ್ತು.

....ಮುಚ್ಚಂಜೆಯಾಯಿತು. ದನಕರುಗಳೆಲ್ಲ ಮನೆಗೆ ಬಂದುವು. ಹೆಂಗಳು ನೀರು ತರುವುದನ್ನು ನಿಲ್ಲಿಸಿದರು. ಕೇಕೆಯಾಟ ನಿಲ್ಲಿಸಿದ ಕಂದಮ್ಮಗಳು ತಾಯ ಸೆರಗಿನ ಆಶ್ರಯವನ್ನು ಬಯಸಿದರು. ನಸುಗತ್ತ ಲಾಯಿತು. ರೈತಕುಲ ಕೊಟ್ಟಿಗೆಯಲ್ಲಿ ನಿಂತ ದನಗಳಿಗೆ ಮೇವು ಹಾಕಿ ಅವುಗಳ ಮೈಯುಜ್ಜಿ ಗಾಳಿಗೆಂದು ಅಂಗಳಕ್ಕೆ ಬಂದಿಳಿದರು.

ಮಾಸ್ತರರ ಮನೆಯಲ್ಲಿ ಜನ ಕಲೆಯ ತೊಡಗಿತು. ಕುಂಬಾರ ಮಲ್ಲಪ್ಪ, ಗುಳೇಕಾರ ಸತ್ಯಪ್ಪ, ಜೀತಗಾರ ಮೂಕಾ.... ಅವರು ಇವರು ಎಲ್ಲಾ ಬಂದು ತಮ್ಮ ತಮ್ಮ ಸ್ಥಳದಲ್ಲಿ ಕುಳಿತರು. ಕಟ್ಟೆಯ ಮೇಲೆ ಮಲ್ಲಪ್ಪ, ಆಚೆಗೆ ಮಾಸ್ತರು, ಅಲ್ಲಿ ಸಾಲೆಯ ಹುಡುಗರು, ಇಲ್ಲಿ ಕೆಳಗೆ ಸತ್ಯಪ್ಪ, ಮೂಕಾ— ಇವರೇ ಆ ಕಟ್ಟೆಯ ಮೇಲಿನ ಸಭಿಕರು. ಅವರ ನಡುವೆ ಗಾಣದ ಎಣ್ಣೆಯನ್ನು ಸೇವಿಸುತ್ತ ಹಣತೆಯೊಂದು ಪ್ರಶಾಂತವಾಗಿ ಮಿನುಗುತ್ತಿತ್ತು.

ದಿನವೂ ಇದೇ ಹೊತ್ತಿಗೆ ಮಾಸ್ತರರು ದಿನಪತ್ರಿಕೆಯ ಸುದ್ದಿಯನ್ನು ಓದಿ ಹೇಳುವರು. ಸುತ್ತಲೂ ಹಳ್ಳಿಯ ಜನತೆ ಕುಳಿತುಕೊಂಡು ಅವರು ಓದಿ ಹೇಳುವ ಸುದ್ದಿಯನ್ನು ಮೈ ಕಿವಿಯಾಗಿ ಕೇಳುವುದು. ಮೊದಲೇ ಅಗಸ್ಟ ಚಳವಳಿಯ ಕ್ರಾಂತಿಕಾಲ! ದೇಶದಾದ್ಯಂತ ಹೋರಾಟ ನಡದಿದೆ! ಅಲ್ಲಿ ಅಷ್ಟು ಹಳ್ಳಿಗಳು ಸ್ವಾತಂತ್ರ್ಯ ಸಾರಿದವು, ಇಲ್ಲಿ ಇಷ್ಟು ಕಂದಾಯದ ಹಣ ಲೂಟಿ ಮಾಡಿದರು, ಅಲ್ಲಿ ಪೋಲೀಸರ ಬಂದೂಕುಗಳನ್ನು ಕಸಿದು ಕೊಂಡರು, ಇಲ್ಲಿ ಓಲೆಕಾರ ಗೌಡರು ಜನತೆಯೊಂದಿಗೆ ಸಹಕರಿಸಿದರು. ಎಲ್ಲೆಲ್ಲೂ ರೈತರು ಆಂದೋಲನಕ್ಕೆ ಬೆಂಬಲವನ್ನೀಯುತ್ತಿರುವರು. ಇದೇ ತೆರನಾದ ಸುದ್ದಿಯನ್ನು ಮಾಸ್ತರರು ಓದುತ್ತಿರುವ ಕಾಲಕ್ಕೆ ನೆರೆದ ಸಭಿಕರ ಮೊಗದ ಮೇಲೆ ಸನ್ನಿವೇಶಕ್ಕೆ ತಕ್ಕ ಹಾಗೆ ನಗೆ, ರೋಷ, ಭಯ ಹರ್ಷ ಸೂಚಕ ರೇಖೆಗಳು ಮೂಡಿ ನಿಲ್ಲುತ್ತಿದ್ದವು.

ಓಲೆಕಾರರ ಮಾತು ಬಂದಾಗ ಬೋಲಾನಿಗೆ ಹಿಗ್ಗು. ತಾನೂ ಏಕೆ ರೈತರೊಂದಿಗೆ ಕೂಡಿಕೊಳ್ಳಬಾರದು, ಓಲೆಕಾರಿಕೆಯನ್ನು ಏಕೆ ಬಿಟ್ಟು ಕೊಡಬಾರದೆಂಬ ಹೆಮ್ಮೆ ಅವನಿಗೆ! ಆಗ ಎಲ್ಲರೂ ಬೋಲಾನನ್ನು ನೋಡುವರು. 'ಭಲಾಪ್ಪ ಬೋಲಾ! ನೀನೂ ಒಂದು ಕೈ ಏಕೆ ನೋಡ ಬಾರದು' ಎಂದು ಯಾರಾದರೂ ಆಗ ಭಾವೋದ್ರೇಕದಿಂದ ಅವನನ್ನು ಕುರಿತು ನುಡಿದರೂ ನುಡಿದಾರು! ಹೀಗೆಯೆ ಒಬ್ಬೊಬ್ಬರ ಮಾತುಕತೆ ಬಂದಾಗ ಸುದ್ದಿಯ ಪ್ರಸಾರದ ಮಧ್ಯದಲ್ಲಿ ಅಡ್ಡಮಾತುಗಳು ಏಳುತ್ತಿದ್ದವು.

ಮಾಸ್ತರರು ಬಂದರು ಕೈಯಲ್ಲಿ ವರ್ತಮಾನ ಪತ್ರಿಕೆಯನ್ನು ಹಿಡಿದುಕೊಂಡು ಉಪನ್ಯಾಸ ಕೊಡುವವರ ರೀತಿಯಲ್ಲಿ ಮುಖದ ಮೇಲೆ ಕೈಯಾಡಿಸುತ್ತ ಕಟ್ಟೆಯನ್ನೇರಿದರು. ತಂಬಾಕ ಹಾಕುವ ಚಟವಿದ್ದವರು ಮಿದ್ದುವುದನ್ನು ಅಷ್ಟಕ್ಕೆ ನಿಲ್ಲಿಸಿ ಬಾಯಿಗೆ ಅದನ್ನು ಹಾಕಿಕೊಂಡು ಗಂಭೀರವಾಗಿ ಕುಳಿತರು. ತಾಂಬೂಲ ಸೇವನೆಯವರು ಕೂಡಲೆ ತಮ್ಮ ಕರ್ತವ್ಯವನ್ನು ಮುಗಿಸಿ ಮೌನ ತಳೆದರು. ಮಾಸ್ತರರು ಸುದ್ದಿಯನ್ನು ಓದುವುದಕ್ಕೆ ಸಿದ್ಧವಾಗುವುದರಲ್ಲಿದ್ದರು.

ಮೂಕಾ ಅಷ್ಟರಲ್ಲಿ ದನಕರುಗಳಿಗೆ ಮೇವು ಹಾಕಿ ಬಂದು ಕಟ್ಟೆಯ ಕೆಳಗಿನ ಪಾವಟಣಿಗೆಯ ಮೇಲೆ ಬಂದು ಕುಳಿತನು. ತಲೆಯ ಮೇಲಿನ

ಮೂರು ಸುತ್ತಿನ ಚಿಕ್ಕ ಪಂಜೆಯನ್ನು ಜಾಡಿಸಿ ಗಡ್ಡದ ಮೇಲೆ ಕೈಯೆಳೆದುಕೊಂಡು ಸುದ್ದಿಯನ್ನು ಕೇಳುವುದಕ್ಕೆ ಸಜ್ಜಾಗಿ ಕುಳಿತನು. ಅವನು ಬಂದು ಕುಳಿತಿರುವುದಷ್ಟೇ ತಡ. ಬನಶಂಕರಿಯು ಅವನ ಸಮೀಪ ದಲ್ಲಿಯೆ ಬಂದಳು. ಮೂಕಾನ ಹತ್ತಿರವೆ ಬಂದು 'ಮೂಕಜ್ಜ' ಎಂದಳು. ಮೂಕಾ ಅವಳ ಕಡೆಗೆ ತಿರುಗಿ ನೋಡಿದ. 'ನನಗೊಂದು ಬಿಲ್ಲಿಯ ಗಡ್ಡ. ಕೊಡಪ್ಪ' ಎಂದಳು. 'ಲಂಗವುಟ್ಟ ದೊರೆಸಾನೀ, ಅವು ಬಂಗಾರದ ಕೂದಲು. ರೊಕ್ಕ ಬಾಳ ಬೇಕವ್ವ' ಎಂದು ಮೂಕಾ ಅವಳಿಗೆ ಉತ್ತರ ಕೊಟ್ಟನು. ಬನಶಂಕರಿ ಮಲ್ಲಪ್ಪನ ಕಡೆಗೆ ತಿರುಗಿ ನೋಡುತ್ತ 'ಮಲ್ಲಜ್ಜ ಮೂಕಜ್ಜನಿಗೆ ಬೇಕಾಗುವಷ್ಟು ರೊಕ್ಕಾನ ನಿನ್ನ ಆವಿಗೆಯಲ್ಲಿ ಮಾಡಿ ಕೊಡಪ್ಪ' ಎಂದಳು. ಎಲ್ಲರೂ ಅವಳ ಮಾತು ಕೇಳಿ 'ಖೊಳ್' ಎಂದು ನಕ್ಕರು.

ಮಾಸ್ತರರು ಆ ಸುದ್ದಿ ಈ ಸುದ್ದಿ ಹೇಳುತ್ತ ಒಮ್ಮಿಂದೊಮ್ಮೆಲೆ ಮೌನ ತಳೆದರು. ಅದೇನೋ ವಿಚಿತ್ರವಾರ್ತೆಯಿರಬೇಕೆಂದು ಎಲ್ಲರೂ ಅವರ ಕಡೆಗೆ ನೋಡಿದರು. ಮೂಗಿನ ಮೇಲೆ ಚಾಳೀಸನ್ನು ಇಳಿಸುತ್ತ 'ಕೇಳ್ರೀ' ಅಂದರು. ಸಭಿಕರಿಗೆ ಇನ್ನೂ ಆಶ್ಚರ್ಯವಾಯಿತು. 'ಐದು ಸಾವಿರ ಬಹುಮಾನ' 'ಯಾತಕ್ಕಾಗಿ?' 'ಮೈಲಾರ ಮಹದೇವಪ್ಪನನ್ನು ಹಿಡಿದು ತಂದುಕೊಟ್ಟವರಿಗೆ.' ಆಳಿನ ಎತ್ತರ ಹೀಗೆ, ಮುಖದ ಬಣ್ಣ ಹೀಗೆ, ನಿಲವು ಈ ರೀತಿ- ಎಲ್ಲಾ ವರ್ಣನೆಯನ್ನು ಮಾಸ್ತರರು ಹೇಳಿದರು. ಚಳವಳಿಯ ಜನರನ್ನು ಕಟ್ಟಿಕೊಂಡು ನಾಡಿನಲ್ಲಿ ಅಶಾಂತಿಯ ಕಿಡಿಯನ್ನು ಹೊತ್ತಿ ಸುತ್ತಿದ್ದಾನಂತೆ ಮೈಲಾರ! ಹಿಡಿದು ತಂದುಕೊಟ್ಟವರಿಗೆ ಸರಕಾರವು ಐದು ಸಾವಿರ ರೂಪಾಯಿ ಬಹುಮಾನ ಕೊಡುವುದಂತೆ.ಯಾರು ಪ್ರಯತ್ನ ಮಾಡುತ್ತೀರಿ?

'ಮೂಕಾ! ಮೂಕಾನೇ ಮಾಡಲಿ' ಬನಶಂಕರಿ ಚಪ್ಪಾಳೆಯಿಕ್ಕುತ್ತ ಹೇಳಿದಳು. ಎಲ್ಲರೂ ಮೂಕಾನ ಕಡೆಗೆ ನೋಡಿದರು. ಅವನ ಮುಖ ಅರ್ಧ ಕ್ಷಣದಲ್ಲಿ ಸತ್ವಹೀನವಾಗಿ ಹೋಗಿತ್ತು! ಜರ್ರನೆ ಜರಿದವನಂತೆ ಅವನು ತೋರಿದನು. ಯಾಕೆ ಮೂಕಾನಿಗೆ ಅಪಮಾನವಾಯಿತೇನು ?

ಆಗದೇನು? ಬಡವನಾದ ಮೂಕಾನ ಹೃದಯದಲ್ಲಿ ಅಪಾರ

ಸಂಪತ್ತು ಅಡಗಿದೆ. ಆ ಸಂಪನ್ನ ಮನದ ಮುಂದೆ ಇನ್ನಾವ ಸಿರಿ ಸಂಪತ್ತು ತಲೆಯೆತ್ತಿ ನಿಂತೀತು? ಹದಿನೈದು ವರುಷಗಳು ಸಂದುವು. ಮಾಸ್ತರರ ಮನೆಯಲ್ಲಿ ಅದೇ ಶ್ರದ್ಧೆಯಿಂದ, ಅದೇ ವಿಶ್ವಾಸದಿಂದ ಅಂದಿನಿಂದ ಇಂದಿನವರೆಗೂ ದುಡಿಯುತ್ತ ಬಂದವ. ಮೂಕಾನ ಪರೀಕ್ಷೆಗಾಗಿ ಮನೆಯೊಡತಿಯೊಮ್ಮೆ ಹೊನ್ನ ಒಡವೆಯೊಂದನ್ನು ಜೋಳದ ಬುಟ್ಟಿಯಲ್ಲಿ ಅಡಗಿಸಿ ಮೂಕಾನ ಕೈಗೆ ತಿರುವಿಕೊಂಡು ಬರಲು ಕೊಟ್ಟಾಗ ಮೂಕಾ ಹೊನ್ನಿಗಾಗಿ ಕರುಬಿ ಅದನ್ನು ಬಚ್ಚಿಟ್ಟು ಕೊಂಡನೇನು? 'ತಾಯೀ, ಇನ್ನೊಮ್ಮೆ ಬಡವನನ್ನು ಪರೀಕ್ಷಿಸಬೇಡಿರಿ. ನನಗೆ ಕಲ್ಲು ಹೊನ್ನು ಸಮ. ದುಡಿದು ಉಣ್ಣುವವನಿಗೆ ನಾಲ್ಕು ದಿನದ ಸಂಪತ್ತು ಎಷ್ಟು ಸುಖ ಕೊಟ್ಟೀತು?' ಎಂದೆನ್ನುತ್ತ ಹೊನ್ನ ಒಡವೆಯನ್ನು ಅಂದು ಮೂಕಾ ತಿರುಗಿ ಕೊಡಲಿಲ್ಲವೇನು? ಈ ಹದಿನೈದು ವರುಷಗಳ ಅವಧಿಯಲ್ಲಿ ಮಾಸ್ತರರ ಮನೆಯ ಪಡಸಾಲೆಯಲ್ಲಿ ಬಿದ್ದ ಕವಡಿಯನ್ನೂ ಕಣ್ಣೆತ್ತಿ ನೋಡದವನಲ್ಲಿ ಇಂದೇಕೆ ಈ ಪ್ರಶ್ನೆ !

ದಾರಿದ್ರ್ಯವಿಂದು ತನ್ನೆಡೆಗೆ ಇಂಥ ಮಾತು ಬೀಸಲು ಹೇಳಿತೇ? ವೈಲರನನ್ನು ಹುಡುಕಿಕೊಡಬೇಕು. ಅದಕ್ಕಾಗಿ ಐದು ಸಾವಿರ ಬಹುಮಾನ! ನಾನು ಆ ಕೆಲಸ ಮಾಡಬೇಕೆ? ಮೂಕಾ ಕುಳಿತಲ್ಲಿಯೆ ಕುಸಿದು ಹೋಗಿದ್ದನು. ಅವನ ಮುಖದ ಮೇಲೆ ನೀರು ಇಳಿಯುತ್ತಿತ್ತು. ಮುಂದೆ ಮಾಸ್ತರರು ಓದಿದುದೇ ಅವನಿಗೆ ತಿಳಿಯಲಿಲ್ಲ.

ಅಂದಿನಿಂದ ಒಂದು ಸಾಯುಂಕಾಲವೂ ಆ ಕಟ್ಟೆಯ ಮೇಲೆ ಅವನು ಕೂಡಲಿಲ್ಲ. ಅಂದು ಸಾಕಷ್ಟು ಪ್ರಾಯಶ್ಚಿತ್ತವಾಯಿತು. ಬಡತನವು ಹಳ್ಳದ ದಡದ ಮೇಲೆ ಬೆಳೆದ ಹುವ್ವು. ತನ್ನ ಬದುಕೂ ಹಾಗೆಯೇ ಇರಲಿ ಪ್ರಪಂಚದ ಸುದ್ದಿಯನ್ನು ಕೇಳಿಯಾದರೂ ತನ್ನಂತಹನು ಮಾಡುವುದೇನಿದೆ? ಆ ದುಃಖ, ಆ ನೋವು, ಆ ಸಂಕಷ್ಟ—ಅವನ್ನೆಲ್ಲ ಕೇಳುವುದೂ ಬೇಡವೆಂದು ಮೂಕಾ • ನಿರ್ಧಾರ ಮಾಡಿದನು. ಅಂದಿನಿಂದವನು ವರ್ತಮಾನ ಪತ್ರಿಕೆಯನ್ನು ಓದುವಂದು ಅಲ್ಲಿ ಸುಳಿಯಲೇ ಇಲ್ಲ. ತಾನಾಯಿತು. ತನ್ನ ಹೊಲ ಮನೆ ಕೆಲಸಗಳಾಯಿತು. ಇನ್ನಷ್ಟು ಹೊತ್ತು ಎತ್ತಿನ ಮೈ ಉಜ್ಜುವ, ನೀರು ಕುಡಿಸುವ.

ಬಹಳವಾದರೆ ಬನಶಂಕರಿಯು ಕೂಡ ಹರಟೆ ಹೊಡೆಯುವ ಎಂದು ಅವನು ಬಯಸಿದನು.

ಇಲ್ಲಿ ವರ್ತಮಾನ ಪತ್ರ ಓದುವುದು ನಡದಿದ್ದರೆ ಅಲ್ಲಿ ಮನೆಯ ಅಂಗಳದಲ್ಲಿ ಬನಶಂಕರಿಯನ್ನು ಹತ್ತಿರ ಕುಳ್ಳಿರಿಸಿಕೊಂಡು ಮೂಕಾ ಆಕೆಗೆ ರಾಜ ರಾಣಿಯರ ಕತೆ ಹೇಳುವ, ಯವನ ಯಾಮಿನೀಯರ ಕತೆ ಹೇಳುವ, ಆಕೆಗಿನ್ನೂ ಕತೆ ಕೇಳುವ ಅಭಿಲಾಷೆಯಾದರೆ ಮುಗಿಯಲಾರದ 'ಅಯ್ಯಪ್ಪನ ಕಷುಬಿನ ಕತೆ'ಯನ್ನು ಹೇಳುವ. ಆ ಹೊತ್ತಿಗೆ ಬನಶಂಕರಿಯ ಪಾಲಿಗೆ ಅವನೇ ಮಾಸ್ತರು. ಅವನೇ ಜಗತ್ತಿನ ಸುದ್ದಿಯನ್ನು ಬಿತ್ತರಿಸುವ ಯಂತ್ರ. ಆ ಹುಡುಗಿಗೂ ಆತನೇ ಜ್ಞಾನ ಭಾಂಡಾರ, ಸುದ್ದಿಯ ಪತ್ರಿಕೆ. ಅವರಿಬ್ಬರ ಪ್ರಪಂಚದಲ್ಲಿ ಸಿರಿ ಬಡತನಗಳ ಭೇದ ಭಾವನೆಯೆ ಇರಲಿಲ್ಲ. ನಿರಾಶಾಭರಿತವಾದ ಸುಂದರ ಪ್ರಪಂಚದಲ್ಲಿ ಒಂದು ಕೂಸು, ಇನ್ನೊಂದು ಮೂಕ ಜೀವ! ಯಾರೂ ಆ ಜೀವಿಗಳನ್ನು ನೋಡಿ ಕರುಬಬೇಕು!

ಹೀಗೆ ದಿನಗಳಿಂತು ಉರುಳ ತೊಡಗಿದವು. ಮಾಸ್ತರರು ಪತ್ರ ಓದುವುದು, ಊರವರು ಸುದ್ದಿ ಕೇಳುವುದು ನಡದೆ ಇದ್ದಿತು. ಈ ನಡುವೆ ಒಂದು ದಿನ ಮೂಕಾನಿಗೆ ಎರಡು ದಿನ ಬಿಡುವು ಬೇಕಾಯಿತು. ಅವನ ಮುದುಕಿ ಕಾನಳ್ಳಿಗೆ ಹೋಗಿದ್ದಳು. ಕರೆದು ತರುವುದಕ್ಕೆ ಮೂಕಾ ಹೊರಡಲೆಳಸಿದನು. ಅದಕ್ಕಾಗಿ ಅವನಿಗೆ ಮಾಸ್ತರರ ಪರವಾನಿಗೆಗಿಂತಲೂ ಬನಶಂಕರಿಯ ಅಪ್ಪಣೆ ಬೇಕಿದ್ದಿತು. ತಾನು ಊರಲ್ಲಿಲ್ಲದ ಎರಡು ದಿನದ ಅವಧಿಯಲ್ಲಿ ಸಂಜೆಯ ಮುಂದೆ ಅಂಗಳದಲ್ಲಿ ಕುಳಿತುಕೊಂಡು ಬನಶಂಕರಿಗೆ ಕತೆ ಹೇಳುವವರಾರು? ಮೂಕಾ ಹೇಗೊ ಮಗುವನ್ನು ರಮಿಸಿ ಆಕೆಯ ಅಪ್ಪಣೆಯನ್ನು ಪಡೆದುಕೊಂಡು ಕಾನಳ್ಳಿಗೆ ಹೊರಟು ನಿಂತನು.

ಗಂಗೀ ಭಾವಿಯನ್ನು ದಾಟಿ ಕಾಡು ಅಡವಿಯನ್ನು ಸೇರಬೇಕು. ಅಲ್ಲಿ ಆರು ಮೈಲಿಗಳ ಅರಣ್ಯದ ದಾರಿಯನ್ನು ತುಳಿದು ಕಾನಳ್ಳಿ ಮುಟ್ಟಬೇಕು. ಮಲ್ಲೂರಿನಿಂದ ಕಾನಳ್ಳಿ ಹನ್ನೆರಡು ತಾಸುಗಳ ದಾರಿ. ಮೂಕಾ ಮಧ್ಯಾಹ್ನದ ಕಾಡು ಬಿಸಿಲಿನಲ್ಲಿ ನಡೆದು ಗಂಗೀ ಭಾವಿಯನ್ನು ಸೇರಿದನು. ಬಿಸಿಲಿನ ತಾಪದಿಂದ ಒಡಲು ಅರಿತ್ತು. ಗಂಗೆಯಲ್ಲಿ ಮಿಂದು

ರೊಟ್ಟಿ ಬುತ್ತಿಯನ್ನು ತಿಂದು ತಾಸೆರಡು ತಾಸು ರಾತ್ರಿಯಾಗುವುದ ರೊಳಗಾಗಿ ಕಾನಳ್ಳಿಯನ್ನು ಸೇರಿದರಾಯಿತೆಂದು ಮನಸ್ಸು ಮಾಡಿ ಮೂಕಾ ಬಾವಿಯಲ್ಲಿಳಿದನು.

ಪಾವಟಣಿಗೆಗಳನ್ನು ಇಳಿಯುತ್ತಲಿದ್ದ ಮೂಕಾನನ್ನು ನಂಬಿ ಬಂದವರೋ ಏನೊ! ಮೇಲೆ ಬಾವಿಯ ಹತ್ತಿರದ ಅಶ್ವತ್ಥ ವೃಕ್ಷದಡಿಯಲ್ಲಿ ಯಾರೋ ಅವನ ಹೆಜ್ಜೆಗಳನ್ನೇ ನೋಡುತ್ತ ನಿಂತಿದ್ದರು. ಮೂಕಾ ಮಿಂದು ಮೇಲೆ ಬರುವಷ್ಟರಲ್ಲಿ ಅರ್ಧ ತಾಸಾಯಿತು. ಇನ್ನೂ ಅವನ ದಾರಿಯನ್ನು ಬಂದವರು ಹಾರೈಸಿಕೊಂಡೇ ನಿಂತಿದ್ದರು! ಮೂಕಾ ಮೇಲಕ್ಕೆ ಬಂದನು. ಅವರು ಹತ್ತಿರ ಬಂದು ಪ್ರಶ್ನಿಸಿದರು.

'ನೀನು ನನಗಷ್ಟು ಉಪಕಾರ ಮಾಡಬಲ್ಲಿಯೇನಪ್ಪ ?' ಬಂದವರು ಮೂಕಾನಿಗೆ ಪ್ರಶ್ನಿಸಿದರು. ಮೂಕಾ ಬೆಚ್ಚಿ ಬಿದ್ದನು.

'ನನ್ನಂತಹ ಬಡವನಿಂದ ಉಪಕಾರವೇ'

'ನೀನು ನನ್ನ ಪಾಲಿನ ರಕ್ಷಕನಾಗಬೇಕು'

'ರಕ್ಷಕ.....!' ಮೂಕಾ ಆಶ್ಚರ್ಯದಿಂದ ಅಪರಿಚಿತರ ಕಡೆಗೊಮ್ಮೆ ಆಕಾಶದೆಡೆಗೊಮ್ಮೆ ನೋಡಿ ತನ್ನ ಪಾಲಿನ ಕರ್ತವ್ಯವನ್ನು ಮಾಡಲು ಒಪ್ಪಿಕೊಂಡನು. ಆ ಒಪ್ಪಿಗೆಯಂತೆ ತನ್ನ ಹರಕು ಬಟ್ಟೆಗಳನ್ನೂ, ತಾನು ತಂದ ರೊಟ್ಟಿಯ ಗಂಟನ್ನೂ ಪೂರ್ತಿಯಾಗಿ ಅಪರಿಚಿತರಿಗೆ ಮೂಕಾ ಅರ್ಪಿಸಬೇಕಾಯಿತು.

ಅತ್ಯಂತ ವಿಶ್ವಾಸದಿಂದ ಮೂಕಾ ಕೊಟ್ಟನು. ಕಾಂಗ್ರೆಸ್ಸಿನ ಮನುಷ್ಯ. ಅಲ್ಲಿ ಕಾಡಿನಲ್ಲಿ ಚಳವಳಿಯವರು ತಲೆ ಮರಸಿಕೊಂಡು ತಿರುಗುತ್ತಿದ್ದಾರೆ. ರಾತ್ರಿಯಲ್ಲಿ ಅಷ್ಟೆ ಸಂಚಾರ. ಅದೂ ವೇಷ ಬದಲಿಸಿಕೊಂಡು ತಿರುಗಾಡ ಬೇಕು. ಕಳೆದ ಎರಡು ಮೂರು ದಿನಗಳಿಂದ ಪೋಲೀಸರ ಬಲವಾದ ಕಾವಲಿನ ಮೂಲಕ ಕಾಡು ಬಿಟ್ಟು ಅಗಲುವುದಕ್ಕಾಗಲಿಲ್ಲ. ಆದುದರಿಂದ ಮೂಕಾನ ಬುತ್ತಿಯ ಗಂಟು ಹಸಿದವರಿಗಾಗಿ ಬಹು ಅಗತ್ಯವಾಗಿದ್ದಿತು. ಮೂಕಾ ಬುತ್ತಿಯ ಗಂಟನ್ನು ನಗುನಗುತ್ತ ಕೊಟ್ಟು ಹಿಗ್ಗಿದನು. ಅಪರಿಚಿತರು ಸಂತೋಷದಿಂದ ತುಂಬಿ ತುಳುಕಾಡಿದರು.

'ನಿನ್ನ ಹೆಸರೇನಪ್ಪ ? ಯಾವೂರವ?' ಅಪರಿಚಿತರು ಕೇಳಿದರು.

'ಮೂಕಾ. ಮಾಸ್ತರ ಮನೆಯ ಜೀತಗಾರ. ಹಿರೇಮಲ್ಲೂರವ'

'ಜೀತಗಾರನೇ? ನಿನ್ನಂತಹನು ಆಳಾಗಬೇಕಿಲ್ಲ ಮೂಕಾ'

'ಅಪ್ಪಾ, ನನ್ನ ದುಡಿತವೆ ನನ್ನ ಸಂಪತ್ತು. ಅದೇ ಸುಖ ಮುಕ್ತಿ'

'ಷಹಬ್ಬಾಸ! ಕಾಯಕವೇ ಕೈಲಾಸವೇನು!'

'ಅದು ನನ್ನಂತವನಿಗೆ ದೊಡ್ಡ ಮಾತು ಆದೀತಪ್ಪ'

ಮೂಕಾನ ಮಾತು ಅಪರಿಚಿತರನ್ನು ಮುಗ್ಧರನ್ನಾಗಿ ಮಾಡಿತು. ಬಡತನ, ಔದಾರ್ಯ! ದಾರಿದ್ರ್ಯ, ದೊಡ್ಡ ಮನಸ್ಸು! ಅವರ ಹೃದಯ ಕೃತಜ್ಞತೆಯ ಭಾರದಿಂದ ತುಂಬಿ ತುಳುಕಾಡಿತು. ಉಕ್ಕುವ ಅಪಾರ ಮಮತೆಯಿಂದ ಅವರು ಮೂಕಾನಿಗೆ ಇನ್ನೊಂದು ಪ್ರಶ್ನೆ ಕೇಳಿದರು

'ನೀನು ಇದಕ್ಕಿಂತಲೂ ದೊಡ್ಡದಾದ ಸಹಾಯವನ್ನು ನನಗೆ ಮಾಡಬೇಕಲ್ಲ'

'ಅದೇನು ಹೇಳಿರಪ್ಪ'

'ನನ್ನ ಹೆಸರು ಮಾದೇವಪ್ಪ. ಓಡುತ್ತ ಹೋಗಿ ಮೈಲಾರ ಇಲ್ಲಿದ್ದಾನೆಂದು ನೀನು ಪೋಲೀಸಿನವರಿಗೆ ಸುದ್ದಿ ಮುಟ್ಟಿಸು. ನಾನು ಇಲ್ಲಿಯೇ ಇರುತ್ತೇನೆ. ನಿನಗೆ ಐದುಸಾವಿರ ರೂಪಾಯಿ ಬಹುಮಾನ ಸಿಗುವುದು. ನಿನ್ನಂತವನು ಜೀತ ನಿಲ್ಲುವುದು ಬೇಡ' ಈ ಮಾತನ್ನು ಕೇಳುತ್ತಿದ್ದಂತೆಯೆ ಮೂಕಾನ ಹೃದಯದ ಮೇಲೆ ಬರೆ ಕೊಟ್ಟಂತಾಯಿತು. ಅವನ ಸಮಸ್ತ ಅಂಗಾಂಗಗಳೆಲ್ಲವೂ ಬಿದ್ದನೆ ಬಿರಿದಂತಾದವು ಮೈಲಾರನಿಗೆ ಅದನ್ನು ಅರಿಯಲು ಬಹಳ ಹೊತ್ತು ಬೇಕಾಗಲಿಲ್ಲ ಕಣ್ಣೀರು ಸುರಿಸುತ್ತ ನಿಂತ ಮೂಕಾನ ಕ್ಷಮೆ ಕೇಳಿ ಬಂದ ದಾರಿ ಹಿಡಿದು ತಿರುಗಿ ಹೋಗ ಬೇಕಾದರೆ ಮೈಲಾರ ಮಹದೇವಪ್ಪನಿಗೆ ಸಾಕು ಬೇಕಾಯಿತು.

ಕಾನಳ್ಳಿಗೆ ಹೋಗಿ ಮುದುಕಿಯನ್ನು ಕರೆದುಕೊಂಡು ಮೂಕಾ ಊರಿಗೆ ತಿರುಗಿ ಪುನಃ ಕೆಲಸಕ್ಕೆ ಬಂದನು. ಅದೇ ಪತ್ರ ಓದುವುದು, ಅದೇ ಸುದ್ದಿಯನ್ನು ಕೇಳುವವರು- ಎಲ್ಲಾ ನಿತ್ಯದ ಕೆಲಸ ನಡದೆ ಇದ್ದಿತು. ಮೂಕಾನ ಪಾಲಿಗೆ ಎಂದಿನಂತೆ ಇವೆಲ್ಲ ಇಲ್ಲ. ತಾನು ತನ್ನ ದನಕರಗಳು ಮತ್ತು ಬನಶಂಕರಿ. ಅದೇ ಅವನ ಪಾಲಿನ ಜಗತ್ತು.

ಇಷ್ಟಕ್ಕಿದ್ದಂತೆಯೆ ಮಾಸ್ತರರಿಗೆ ವರ್ಗವಾಯಿತು. ಪತ್ರ

ಓಮವುದು ನಿಂತು ಹೋಯಿತು. ಜೇನು ಹುಟ್ಟು ಹರಿದಂತಾಯಿತು. ಗುಳೇಕಾರ ಸತ್ಯಪ್ಪನ ಮನೆಯಲ್ಲಿ ಕ್ಷೇಮವಿರಲಿಲ್ಲ. ಓಲೆಕಾರ ಬೋಲಾಸಿಗೆ ಆವಸದೇ ಚಿಂತೆ. ಕುಂಬಾರ ಮಲ್ಲಪ್ಪನ ಆರೋಗ್ಯ ಸರಿಯಿರಲಿಲ್ಲ. ಮಾಸ್ತರರ ಮನೆಯು ಕಟ್ಟಿ ಬಣ ಬಣ ಎನ್ನ ತೊಡಗಿತು.

ಮಾಸ್ತರರು ಹತ್ತಿರವೆ ಇದ್ದುಕೊಂಡು ಪತ್ರ ಓದಿ ಸುದ್ದಿ ಹೇಳುತ್ತಿದ್ದರೆ ತನಗೆ ಎಷ್ಟೋ ನೆಮ್ಮದಿಯೆಂದು ಮೂಕಾ ನೂರೊಂಮ ಬಾರಿ ಅಂದುಕೊಂಡನು. ಅವರಿದ್ದರೆ ಪೃಥಿವಿ ತನ್ನ ಸುತ್ತು ತಿರುಗುತ್ತಿದ್ದಂತೆ ಮೂಕಾನಿಗೊಂದು ಅನುಭವ. ಆದರೆ ಅವರಿಲ್ಲದ ತನ್ನ ಬಾಳು ಬರಡು ಎಂದು ಅವನಿಗೆ ಹೇಗೊ ಅನ್ನಿಸಿತು. ಮನಸ್ಸಿನಲ್ಲಿ ಸಮಾಧಾನವಿಲ್ಲದ ಮೂಕಾನನ್ನು ಬನಶಂಕರಿ ಅರಿತುಕೊಂಡಳೊ ಏನೋ! 'ನೀನು ಹೀಗ್ಯಾಕ ಮಾಡತೀಯಪ್ಪ ಮೂಕಾ ! ನನಗೇನೂ ಕತೀನ ಹೇಳವಲ್ಲಿ' ಮಗುವಿಗೆ ಸಹಜವಾದ ಸಾರಳ್ಯದಿಂದ ಬನಶಂಕರಿ ಮೂಕಾಸಿಗೆ ಪ್ರಶ್ನಿಸಿದಳು.

'ಇಲ್ಲವ್ವ. ಇನ್ನು ಮೇಲೆ ಹೇಳತೇನಿ ಆತೇನು!' ಎಂದು ಮೂಕಾ ಬನಶಂಕರಿಗೆ ಉತ್ತರವಿತ್ತು ಸಮಾಧಾನ ಹೇಳಿದನು

ಕಳಸದ ಸಾಲೆಗೆಂದು ಹೋದ ಮಾಸ್ತರರು ಒಂದು ದಿನ ಬಿಡುವಿನ ಸಮಯ ನೋಡಿಕೊಂಡು ಎರಡು ದಿನಗಳ ಮಟ್ಟಿಗೆ ಊರಿಗೆ ಬಂದರು. ಅದೇ ಎರಡು ದಿನ ಏನು ಚಂದ! ಪುನಃ ಪ್ರಪಂಚ ಸುತ್ತುವರೆಯ ತೊಡಗಿತು.

ಪತ್ರ ಓದಿ ಮಾಸ್ತರರು ಸುದ್ದಿ ಹೇಳುತ್ತಿದ್ದರು ! ಅಂದು ಮೂಕಾ ಅವರ ಹತ್ತಿರವೆ ಬಂದು ಕುಳಿತನು. ಎರಡು ದಿನದ ಮಟ್ಟಿಗೆ ಇಲ್ಲಿ ಕುಳಿತಿರುವುದೆ ಪುಣ್ಯವೆಂದು ನಂಬಿ ಕುಳಿತನು. ಸಭಿಕರೆಲ್ಲ ಸ್ತಬ್ಧ ವಾಗಿದ್ದರು. ಚಳವಳಿಯ ಬೆಂಕಿಯನ್ನು ಆಳುವವರು ನಂದಿಸಲು ಯತ್ನಮಾಡಿದಂತೆಲ್ಲ ಅಗ್ನಿ ನೂರ್ಮಡಿ ಆವೇಶದಿಂದ ಕನಲಿ ಹೆಚ್ಚುತ್ತಿರುವುದೆಂಬದನ್ನು ಮಾಸ್ತರರು ಸುದ್ದಿಯ ವಿವರಗಳ ಮೂಲಕ ಸ್ಪಷ್ಟೀಕರಿಸುತ್ತಿದ್ದಂತೆಯೆ ನಡುವೆ ಒಮ್ಮಿಂದೊಮ್ಮೆಲೆ ನಿಂತು 'ಘೋರ ವಾರ್ತೆ!' ಎಂದರು.

ಬನಶಂಕರಿಗೆ ಕತೆ ಹೇಳುವುದನ್ನು ತಪ್ಪಿಸಿ ಬಂದು ಅಪರಾಧ ಮಾಡಿದವನಂತೆ ಕುಳಿತಿದ್ದ ಮೂಕಾ ಮಾಸ್ತರು ಹೇಳುವ ಘೋರ ವಾರ್ತೆಗೆ ಕಿವಿಗೊಟ್ಟನು.

ಮಹದೇವಪ್ಪ ಮೈಲಾರನನ್ನು ಸರಕಾರದವರು ಹೊಸರಿತ್ತಿಯಲ್ಲಿ ಗುಂಡು ಹಾಕಿದರು !

ಸರಕಾರದ ಕಂದಾಯದ ಹಣವನ್ನು ಪೋಲೀಸರಿಂದ ಕಸಿದು ಕೊಂಡೊಯ್ಯಲು ಸಂಗಡಿಗರನ್ನು ಕಟ್ಟಿಕೊಂಡು ಬಂದಿದ್ದನಂತೆ ಮಹದೇವ! ಪೋಲೀಸರು ಜಪ್ಪಿಸಿ ಕುಳಿತು ಗುಂಡು ಹೊಡೆದರು ! ಹತ್ತಿರ ಕೋವಿಯಿದ್ದರೂ ಮೈಲಾರ ಹಾರಿಸಲಿಲ್ಲ. ಶಾಂತಿ ಮಂತ್ರ ಜಪಿಸುತ್ತ ಕನ್ನಡ ನಾಡಿನ ವೀರ ಗುಂಡಿನೇಟಿಗೆ ಆಹುತಿಯಾದನು!

ಮಾಸ್ತರರು ಸುದ್ದಿ ವಿವರಿಸಿ ಹೇಳಿಯೆ ಹೇಳುತ್ತಿದ್ದರು. ಮೂಕಾನ ಕಣ್ಣಿನಂಚಿನಲ್ಲಿ ನೀರು ಪಳ ಪಳ ಉದುರಿ ಬೀಳುತ್ತಲೆ ಇದ್ದವು.

'ನಾನು ಅಪರಾಧ ಮಾಡಿದೆ. ಮೈಲಾರ ಮಹದೇವಪ್ಪನನ್ನು ಅಂದೇ ಸೆರೆ ಹಿಡಿದು ಕೊಡಬೇಕಿತ್ತು. ಹಾಗಾಗಿದ್ದರೆ ಅವನು ಗುಂಡಿನೇಟಿಗೆ ಆಹುತಿಯಾಗುತ್ತಿರಲಿಲ್ಲ' ಮೂಕಾ ತನ್ನಲ್ಲೆ ತಾನು ಹೇಳಿಕೊಳ್ಳುತ್ತಾನೆ. ಕಣ್ಣೀರು ಹಾಕುತ್ತಾನೆ. ಒಬ್ಬರಿಗೂ ಅವನ ಕಡೆಗೆ ಗಮನವಿಲ್ಲ.

ಆದರೆ ಮೂಕಾನ ಶಿಷ್ಯೆಯೊಬ್ಬಳು ಮುಂದೆ ಬಂದಳು. ಹತ್ತು ವರುಷದ ಬನಶಂಕರಿ ಮೂಕಾನನ್ನು ನೋಡುತ್ತಲೆ ತಬ್ಬಿಕೊಂಡಳು. ಅವಳಿಗೆ ಗೊತ್ತಾಗಲಿ ಒಲ್ಲದು. ಮೂಕಾನ ಕಣ್ಣಿನಲ್ಲಿ ನೀರು ಏಕೆ ?

'ಬಾ ಮೂಕಜ್ಜ. ಈ ಪತ್ರದ ಉಸಾಬರಿ ನಮಗೆ ಬೇಡ. ನಿನಗೆ ಯಾವು ಈ ಸುದ್ದಿ ಕೇಳ ಬಾ ಅಂದರು. ಬಿಡು ಅದನ್ನು. ಕತೆ ಹೇಳ ಬಾ'

ಬನಶಂಕರಿಯ ಅಭಿಪ್ರಾಯ ಎಷ್ಟು ಸುಂದರ! ಗುಲಾಮಗಿರಿ ಸ್ವಾತಂತ್ರ್ಯ, ಬಡತನ ಒಡೆತನ, ಕೀಳು ಮೇಲು— ಎಷ್ಟು ವೈಷಮ್ಯ ಈ ಮನುಜ ಲೋಕದಲ್ಲಿ! ಒಂದೆ ಗಾಳಿ, ಒಂದೆ ನೀರು, ಒಂದೆ ನೆಲ, ಒಂದೆ ಬಾನು! ಆದರೂ ಲೆಕ್ಕವಿಟ್ಟು ಹೇಳಬಾರದಷ್ಟು ಕ್ರೌರ್ಯ ವಿಷಮತೆ, ಭಿನ್ನತೆ! ಈ ಲೋಕದ ಆಸೆ ಇನ್ನು ಮೇಲೆ ಬೇಡ. ಕಾಡ ಹೂವಿನಂತೆ ಹಳ್ಳದ ದಡದಲ್ಲಿ ಬಿರಿದು ಅರಳಿ ಮಘ ಮಘಿಸಿ ಮಣ್ಣಿನಲ್ಲಿ ಅಡಗಿ

ಹೋಗುವುದೇ ಜೀವನದ ಪರಮ ಸುಖ! ಲೋಕದ ಚಿಂತೆಯನ್ನು ಕಟ್ಟಿಕೊಂಡು ಬಾಳಿನ ಕಡಲಲ್ಲಿ ತೇಲಿ ಮುಳುಗುವುದರಲ್ಲಿ ಏನರ್ಥವಿದೆ....?

ಅಗೋ 'ಈದ' ಹಬ್ಬದ ಪ್ರಾರ್ಥನೆ! ಮಸೀದೆಯ ಮೇಲೆ ಹಾಯ್ದು ಸಂದೇಶ ಗಾಳಿಯಲ್ಲಿ ತೂರಿ ತೂರಿ ಬರುತ್ತಿದೆ!

ನೂರು ಸ್ವರದಲ್ಲಿ ಒಂದು ಸ್ವರ! ಪ್ರತ್ಯೇಕವಾದ ಧ್ವನಿ! ಅದು ಮೂಕಾನದೇ. ನಮ್ಮ ಜೀತಗಾರ ಮೂಕಾನದೆ. ಮೂಕಾ ಅಳುತ್ತಿದ್ದಾನೆಯೆ? ತಾನು ಮಾಡಿದ ತಪ್ಪನ್ನು ನೆನೆದು ಶೋಕಿಸುತ್ತಿದ್ದಾನೆಯೆ? ಮಂಡೆಗಾಲೂರಿ ಕೈ ಮುಗಿದುಕೊಂಡು ಪೈಗಂಬರನಲ್ಲಿ ಕ್ಷಮೆ ಕೋರುತ್ತಿದ್ದಾನೆಯೆ!........ ಅಲ್ಲಾಹೋ ಅಕ್ಬರ್........!

ಹೇ, ಮುಸಲ್ಮಾನ ಬಾಂಧವಾ! ನಿನಗೆ ಈದ್ ಮುಬಾರಕ್ !



# ಕುಂಬಾರ ಮಲ್ಲಪ್ಪ

ಕುಂಬಾರ ಮಲ್ಲಮ್ಮ ಗುಡಾರವನ್ನು ಓರೆಮಾಡಿ ಚಿಮಣಿಯನ್ನು ಹಿಡಿದು ತೋರಿಸಿದಳು. ಮಂಕು ಬೆಳಕಿನಲ್ಲಿ ಮಲ್ಲಪ್ಪನ ಮುಖವನ್ನು ನೋಡಿದೆ. ಅವನ ಕಂಗಳ ಗುಡ್ಡೆಯ ಮೇಲೆ ಸಾವು ಬಂದು ಕುಳಿತಂತೆ ತೋರಿತು. ಮುಖದ ತುಂಬ ಬೆಳೆದ ಕೂದಲು, ಕಾಂತಿಹೀನವಾದ ನೋಟ, ಒಣಗಿ ಹೋಗಿದ್ದ ತುಟಿ, ಒಳ ಸೇರಿದ ಗಲ್ಲ, ಗೆರೆ ಕೊರೆದ ಹಣೆ- ಇವನು ಮಲ್ಲಪ್ಪನೇನು ? ಕುಂಬಾರ ಮಲ್ಲಪ್ಪ ಅಹುದೇನು ? ಅರಲು ಮಿದ್ದಿ ಹಾಳೆ ತೀಡಿ ತಿಗರಿ ತಿರುಗಿಸುತ್ತ ಗಡಗಿಯನ್ನು ನಗುನಗುತ್ತ ಮೂಡಿಸುತ್ತಿದ್ದ ಮಲ್ಲಪ್ಪ ಇವನೇ ಏನು? ನಾನು ನಂಬಲಾರದೆ ಹೋದೆ. ತನ್ನ ವಜ್ರ ಮುಷ್ಟಿಗೆ ಸೇರಿಸಿಕೊಳ್ಳುವ ಮುನ್ನ ಸಾವು ಈ ರೀತಿ ಸಂಚು ಹೂಡುತ್ತಿದೆ ಯೆನ್ನುವುದನ್ನು ಎಂದಿಗೂ ನೆನೆಯದೆ ಹೋದೆ. ಅವನ ಕಣ್ಣಿನಲ್ಲಿ ಕಣ್ಣಿಟ್ಟು 'ಮಲ್ಲಪ್ಪ' ಎಂದು ನಾನು ಕರೆಯುವ ಹೊತ್ತಿಗೆ ಮಲ್ಲಮ್ಮ ಗಟ್ಟಿ ದನಿ ಮಾಡಿ ಅಳತೊಡಗಿದಳು.

'ಯಾಕೆ ಅಳುತಾಳೊ ಇವಳು ? ತಾನು ಉಳೀತೇನಂತ ನಂಬ್ಯಾಳೇನೊ' ಎಂದು ಮಲ್ಲಪ್ಪ ಉಸಿರನ್ನು ಎಳೆದುಕೊಳ್ಳುತ್ತ ಹೆಂಡತಿಗೆ ಹೇಳಿದನು.

'ನೋಡ್ರೆಪ್ಪ. ಇವರಿಗೆಂತ ಮನಸ್ಸು' ಎಂದು ಮಲ್ಲಮ್ಮ ಇನ್ನೂ ಗಟ್ಟಿಯಾಗಿ ಅಳಲಾರಂಭಿಸಿದಳು.

'ನೀವರ ಅಟು ಹೇಳ್ರಿಪ ಆಕಿಗೆ' ಎಂದೆನ್ನುತ್ತ ಮಲ್ಲಪ್ಪ ತುಸು ಗೋಣು ತಿರುಗಿಸಿ ನನ್ನನ್ನೇ ನೋಡಿದನು.

ಆ ಕಾಲದಲ್ಲಿ ಸಾಂತ್ವನ ಹೇಳುವ ಶಕ್ತಿಯೇ ನನಗಿರಲಿಲ್ಲ. ನಾನು ಹುಬ್ಬಳ್ಳಿಯ ವಾಣಿಜ್ಯ ವಿದ್ಯಾಲಯದಲ್ಲಿ ಪ್ರಾಧ್ಯಾಪಕನಾದ ಸಂಗತಿಯನ್ನು ಮಲ್ಲಪ್ಪನಿಗೂ ಮಲ್ಲಮ್ಮನಿಗೂ ಯಾರೋ ಹೇಳಿದ್ದರು. ಮಲ್ಲಪ್ಪನಿಗೊಂದು ಅಭಿಲಾಷೆ. ನಾನು ಮಲ್ಲೂರ ಹತ್ತಿರವೆ ಕೆಲಸ ಮಾಡುತ್ತಿರಬೇಕು. ವಾರಕ್ಕೊಮ್ಮೆ ಬಂದು ಅವನೊಡನೆ ನಾನು ಮಾತನಾಡಿ ಮುಖ ತೋರಿಸಿ

ಹೋಗಬೇಕು. ಹೀಗೆ ನನ್ನ ಬಗೆಗೆ ಆಸೆಯಿಟ್ಟುಕೊಂಡಿದ್ದ ಮಲ್ಲಪ್ಪನು ನಾನು ಹುಬ್ಬಳ್ಳಿಗೆ ಬಂದ ಸಂಗತಿಯನ್ನು ಕೇಳಿ ಬೇನೆಯ ಹಾಸುಗೆಯ ಮೇಲೆಯೆ ಹುಳು ಹುಳು ನಕ್ಕನೆಂದು ಯಾರೋ ತಂದ ಸುದ್ದಿ ನನ್ನ ಮೈಗೆ ಆನಂದದ ಮುಳ್ಳು ಹಿಡಿಸಿತು. ಉಪಾಧ್ಯಾಯನ ಇದಿರಿಗೆ ಕುಳಿತು ಕೈಂಕರ್ಯ ಭಾವದಿಂದ ಪಾಠ ಹೇಳಿಸಿಕೊಳ್ಳುತ್ತಿದ್ದ ವಿದ್ಯಾರ್ಥಿಗಳ ನಿಲವನ್ನೇ ಸೂಚಿಸುವಂತಿತ್ತು, ಮಲ್ಲಪ್ಪ ಮಲ್ಲಮ್ಮರ ಆ ಸಾನ್ನಿಧ್ಯ! ಆ ಕಾಲದಲ್ಲಿ ಒಂದು ಶಬ್ದವನ್ನು ಕೂಡ ಆಡುವುದಕ್ಕೆ ನನಗೆ ಬಾಯಿ ಬರಲಿಲ್ಲ. ದುಃಖದ ಸಮೀಪದಲ್ಲಿ ಕುಳಿತುಕೊಂಡು ದಿಗ್ಭ್ರಮೆಗೊಂಡ ನಾನು ಒಮ್ಮೆ ಮಲ್ಲಪ್ಪನ ಮುಖವನ್ನು ನೋಡಿದೆ. ಇನ್ನೊಮ್ಮೆ ಮಲ್ಲಮ್ಮನ ಮುಖವನ್ನು ನೋಡಿದೆ.

'ಇವರ ಮುಂದೆಯೇ ನಾನು ಹೋಗಬೇಕರೀ.... ಶಿವನೆ..' ಆ ತಾಯಿ ಬಿಕ್ಕುತ್ತಲೆ ಇದ್ದಳು.

'ನೋಡಿದರವಾ ನನಗ್ಯಾಕ ಲಗೂನ ಸಾವು ಬರಲೊಲ್ಲದು. ಬರೂದ ಹೌದ ಅಂದಮ್ಯಾಲ ತಡ ಯಾಕರವ....!' ತನ್ನ ಹಣೆಯ ಮೇಲೆ ಕೈಯಿಟ್ಟುಕೊಂಡು ಮಲ್ಲಪ್ಪ ನನ್ನ ಮುಖವನ್ನು ಹುಳು ಹುಳು ನೋಡಿದ.

'ಅಳಬೇಡ ಮಲ್ಲಮ್ಮ. ನಾವೇನು ಕಡೆತನಕ ಇರಲು ಬಂದವರೇ ತಾಯಿ'

'ಇಲ್ಲಿರವ ಆಕೀನ ಇರೋಕಿ' ಹೀಗೆನ್ನುತ್ತ ಮಲ್ಲಪ್ಪ ಸಂಕಟದಿಂದ ಉರುಳಾಡತೊಡಗಿದ. ಅವನ ಹೊದಿಕೆ ಆ ಕಾಲದಲ್ಲಿ ಸರಿಯಿತು. ಗಂಡನ ದೇಹವನ್ನು ಆ ಕ್ಷಣದಲ್ಲಿ ಮುಚ್ಚಬಯಸಿ ಮಲ್ಲಮ್ಮ ಹೊದಿಕೆಯನ್ನು ಸರಸರನೆ ಹೊದಿಸತೊಡಗಿದಳು. ಅವಸರದಲ್ಲಿ ಹೊದಿಕೆ ಪೂರ್ತಿಯಾಗಿ ಸರಿಯಿತು!

ಮಲ್ಲಪ್ಪ ಇನ್ನೇನೂ ಅಲ್ಲ! ಎಲುಬಿನ ಹಂದರ! ಮನುಷ್ಯ ಸಾವ ಮುನ್ನ ಹೀಗಾಗುತ್ತಾನೆಯೇನು? ರಕ್ತ ಮಾಂಸಗಳಿಂದ ತುಂಬಿಕೊಂಡ ಸುಪುಷ್ಟವಾದ ಈ ಶರೀರ, ಈ ಚೆಲುವು, ಈ ನೋಟ, ಈ ಬಿಂಕ, ಯೌವನದ ಈ ಮದ ಒಂದಿಲ್ಲೊಂದು ದಿನ ಹೀಗೆಯೆ ಎಲುವಿನ ಹಂದರವಾಗಬೇಕೇನು? ಮಲ್ಲಪ್ಪಾ ನೀನು ನಕ್ಕು ನಗಿಸಿ ಕತೆ ಹೇಳುತ್ತಿದ್ದೆಯಲ್ಲ?

ಕುಣಿಯುತ್ತ ತಿಗರಿ ತಿರುಗಿಸಿ ಮಡಿಕೆ ಮಾಡುತ್ತಿದ್ದೆಯಲ್ಲ? ಬಾಲಕಿಯರನ್ನು ಪೀಡಿಸಿ ಗಂಡನ ಹೆಸರು ಕೇಳುತ್ತಿದ್ದೆಯಲ್ಲ? ಅದೆಲ್ಲ ನಾಟಕದಂತಾಯಿತೆ ?

'ಹೌದಪ್ಪ ಜೀವನವೆ ಒಂದು ನಾಟಕ. ನಾವು ಇಲ್ಲಿ ಇರುವಷ್ಟು ದಿನ ಈ ಪ್ರಪಂಚವೆಂಬ ರಂಗಭೂಮಿಯ ಮೇಲೆ ಪಾತ್ರಕ್ಕನುಗುಣವಾಗಿ ನಟನೆ ಮಾಡಲೇಬೇಕು'

'ಹೌದು'

'ತನ್ನ ಪಾಲಿನ ನಟನೆ ಮುಗಿದ ಮೇಲೆ ರಂಗಭೂಮಿಯ ಮೇಲೆ ಒಂದು ನಿಮಿಷ ಕೂಡ ನಿಲ್ಲಲು ಅಧಿಕಾರವಿಲ್ಲ'

'ನಿಜ, ಮಲ್ಲಪ್ಪ'

'ಬಡತನ ಸಿರಿವಂತಿಕೆ, ನೌಕರ ಜವಾನ, ಜನನ ಮರಣ ಅವೆಲ್ಲವುಗಳ ಸೋಗನ್ನು ಹಾಕಿ ಆಟವಾಡಬೇಕಾಗುವುದು'

'ಹೌದೌದು'

'ಸಿರಿಗಿರಬಾರದು ಸೊಕ್ಕು. ಆಕೆ ಚಂಚಲೆ. ಹೊಸ ಮಗುವಿನ ಉದಯವನ್ನು ಸಂಭ್ರಮದಿಂದ ಸ್ವಾಗತಿಸುವವನು ಜೀವನದ ಬಿಡುಗಡೆಯನ್ನು ಸಂತೋಷದಿಂದ ಕೋರುವುದಕ್ಕೆ ಸಿದ್ಧವಾಗಿರಬೇಕು. ಈ ಭೂಮಿಯ ಮೇಲೆ ಯಾವದೂ ತಿರವಲ್ಲ'

'ನಿನ್ನ ಮಾತು ಸತ್ಯವಿದೆ ಮಲ್ಲಪ್ಪ. ಸಾಮ್ರಾಜ್ಯಶಾಹಿಯ ಸಾವಿನ ಸಮಯದಲ್ಲಿ ಹಿಂದೂ ದೇಶದಲ್ಲಿ ಹೊಸ ಮಗುವೊಂದು ಹುಟ್ಟುತ್ತಿದೆ'

'ಅದೇನು ತಮ್ಮಾ ಇಂಗ್ಲೀಷರು ಹೋಗುತ್ತಿದ್ದಾರೆಯೆ?'

'ಮಲ್ಲಪ್ಪ, ನಾಳೆ ೪೭ ನೆಯ ಅಗಸ್ಟು ಹದಿನೈದರ ಮಧ್ಯರಾತ್ರಿಗೇ ಪೂಜ್ಯ ಹಿಂದೂ ದೇಶ ಸಾಮ್ರಾಜ್ಯಶಾಹಿಯ ಬಂಧನದಿಂದ ಬಿಡುಗಡೆಯಾಗುತ್ತಲಿದೆ. ಇಂಗ್ಲೀಷರ ರಾಜಧಾನಿಯ ಮೇಲೆ ಅಸ್ತಂಗತನಾದ ಸೂರ್ಯ ಮಧ್ಯರಾತ್ರಿಗೇ ಭಾರತದ ಪ್ರಾಚೀ ದಿಗಂತದಲ್ಲಿ ಉದಯವಾಗಲಿದ್ದಾನೆ....'

'ತಮ್ಮಾ, ನಮ್ಮೂರಿನ ಮಾಸ್ತರನ್ನು ಆ ಚಳವಳಿಯ ಕಾಲದಲ್ಲಿ ಹಿಡಿದುಕೊಂಡು ಹೋದಾಗಲೆ ನಾನಿದನ್ನು ಊಹಿಸಿದ್ದೆ. ಒಬ್ಬ ಗುಳೇ

ಕಾರನೆ, ಒಬ್ಬ ಜೀತಗಾರನೆ, ಓಲೆಕಾರನೊಬ್ಬನೆ, ವಿದ್ಯಾರ್ಥಿಯೊಬ್ಬನೆ ನಾಡಿನ ತುಂಬ ಹರಹಿಬಿಟ್ಟ ಹಳ್ಳಿಗಳಲ್ಲಿ ಜೀವ ಹಿಡಿದುಕೊಂಡು ನೆಲಸಿದ್ದ ನೆಲದ ಮಕ್ಕಳಿಗೆ ಆಳುವವರು ಕೊಟ್ಟ ಕಷ್ಟವನ್ನು ನೋಡಿದಾಗಲೆ ಆಂಗ್ಲರ ಸಾಮ್ರಾಜ್ಯಶಾಹಿಯ ನಾಟಕದ ಕೊನೆಯ ಅಂಕ ನಡೆದಿದೆಯೆಂದು ಅಂದಿಗೇ ಊಹಿಸಿದ್ದೆನಪ್ಪ ನಾನು!'

'ನೀನನ್ನುವುದು ನಿಜ, ಮಲ್ಲಪ್ಪ! ಮಹಾತ್ಮರನ್ನು ಏನೆಷ್ಟು ಕಾಡಿಸಿದರು ಇವರು! ಪಾಂಡವರನ್ನು ಕಾಂತಾರದಲ್ಲಿ ಕೌರವರು ತಿರ್ರನೆ ತಿರುಗಿಸಿದ ರೀತಿಯಲ್ಲಿ ಶಾಲಾಖಾತೆಯ ಸಜ್ಜನರನ್ನ ಈ ಭಂಡವಲು ಶಾಹಿಯ ಮರಿಗಳು ಕಾಡಿಸಿದರಲ್ಲ ಅಂದು! ಅದರ ಪಾಪ........! ಒಂದಲ್ಲ ಎರಡಲ್ಲ ಅವರು ಕೊಟ್ಟ ಕೋಟಲೆ........!'

'ಅದು ಕೋಟಲೆಯಲ್ಲ.......! ಅವರು ಆಡಬೇಕಾಗಿದ್ದ ನಟನೆ ಆದೆಲ್ಲ! ಇಂದಿಗೆ ಮುಗಿಯಿತಲ್ಲ ಆಂಗ್ಲರು ಆಡುವ ನಾಟಕ!'

'ನೀನು ಇರಬೇಕು ಮಲ್ಲಪ್ಪ! ಈ ಸಂಭ್ರಮದ ಸಂಲಗ್ನದ ಸುಮುಹೂರ್ತದಲ್ಲಿ ನೀನಿರಬೇಕೆಂದು ನನ್ನ ಬಲವಾದ ಆಸೆ! ಹದಿನೈದರ ಮಧ್ಯರಾತ್ರಿಗೆ ನಮ್ಮ ಅಶೋಕ ಚಕ್ರಾಂಕಿತ ರಾಷ್ಟ್ರಧ್ವಜ ಬಾನಿನಲ್ಲಿ ಏರುವವರೆಗೂ ನಮಗಾಗಿ, ನೀನು ಜೀವ ಹಿಡಿದು ಕೊಂಡಿರಬೇಕು. ಸ್ವತಂತ್ರ ಹಿಂದೂದೇಶದ ಮೊದಲ ಪ್ರಜೆಯಾಗುವ ಸುಖವನ್ನು ಒಂದು ನಿಮಿಷವಾದರೂ ನೀನು ಅನುಭವಿಸಬೇಕೆಂಬ ಆಸೆ ನನಗಿದೆ.......'

'ಅದಕ್ಕಾ ಪುಣ್ಯಬೇಕು ತಮ್ಮಾ! ಅದು ಋಷಿಯ ಭಾಗ್ಯ. ಅಂತ ಸುಖ ನನ್ನದಾದೀತೇನಪ್ಪ!'

'ನಿನ್ನದೇ ಆಗಬೇಕು ಮಲ್ಲಪ್ಪ! ನಿನಗೆ ಆ ಭಾಗ್ಯ ಬರದಿದ್ದರೆ ಇನ್ನಾರಿಗೆ ಬರಬೇಕು? ನೆಲದ ಮಣ್ಣು ತಂದು ಮಿದ್ದಿ ಮಡಿಕೆ ಮಾಡುವ ನೀನು ಲೋಕಕ್ಕೊಂದು ಪಾಠ ಕಲಿಸಿದೆ. ಮಡಿಕೆಯ ಮಾಡುವರೇ ಮಣ್ಣೊ ಮೊದಲು. ಶಿವ ಪಥ ಅರಿವೊಡೆ ಗುರು ಪಥವೆ ಮೊದಲು! ಶರಣರು ಅರಿತ ತತ್ವ ನಿನ್ನಂತಹರ ಬಾಳಿನಿಂದ ಊರಿ ಬಂದದ್ದು! ನೀನು ನಮ್ಮ ಪಾಲಿನ ಋಷಿ!'

'ಛೀ, ಹುಚ್ಚ ! ಹೊಟ್ಟೆಗಾಗಿ ದುಡಿದವರು ನಾವು. ನೀನು ಹೇಳುವ ಬಿಡುಗಡೆಯ ದಿವಸವನ್ನು ಬರಮಾಡಿಕೊಳ್ಳುವ ಪುಣ್ಯ ಹೇಗೆ ನನ್ನದಾಗಬೇಕು? ದೇಶಕ್ಕಾಗಿ ಏನು ಕೊಟ್ಟ ಪುಣ್ಯವಂತ ನಾನೆಂದು ಹೇಳಲಿ? ಒಂದು ಹನಿ ರಕ್ತ ಕೊಟ್ಟೆನೇ? ಒಬ್ಬ ಮಗನ ಆತ್ಮಾರ್ಪಣ ಮಾಡಿದೆನೆ? ಏನು ಮಾಡಿದೆನೆಂದು ಹೆಮ್ಮೆಯಿಂದ ಹೇಳಿ ಬಂಧಮುಕ್ತ ಹಿಂದೂದೇಶದ ಪ್ರಜೆಯಾಗುವುದಕ್ಕೆ ನಾನು ಜೀವಿಸಲಿ?'

'ಮಲ್ಲಪ್ಪ! ತಲೆ ಮರೆಸಿಕೊಂಡು ಊರಿನ ಗುಡಿಗುಂಡಾರದಲ್ಲಿ ವಾಸವಾಗಿದ್ದ ಸ್ವಾತಂತ್ರ್ಯ ಸೇನಾನಿಗಳಿಗೆ ಅನ್ನವಿತ್ತ ನೀನು ಪುಣ್ಯವಂತನಲ್ಲ?'

'ಅದೇ ಕಾರಣದಿಂದ ಬದುಕಲಾ ? ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಹೋಗುವ ನನಗೆ ಅಷ್ಟು ಪುಣ್ಯದ ಊರುಗೋಲು ಸಾಕೆ ನನ್ನಪ್ಪ!'

'ನನಗೆ ಹುಚ್ಚನೆನ್ನುವ ನೀನೇ ದೊಡ್ಡ ಹುಚ್ಚ ! ನೀನು ಸ್ವತಂತ್ರ ಭಾರತದಲ್ಲಿ ಒಂದು ಚಣವಾದರೂ ಉಸಿರಾಡಿಸಿ ಈ ನಾಟಕ ಮುಗಿಸಬೇಕೆಂದು ನನ್ನ ಪ್ರಾರ್ಥನೆ'

'ಓ, ಅದೆಂಥ ಭಾಗ್ಯ! ಆ ಮಧ್ಯರಾತ್ರಿ, ಆ ಬೆಳಕು, ಆ ಸ್ವಾತಂತ್ರ್ಯ ಆ ಅಮೃತತತ್ವ— ಅದೆಲ್ಲ ಋಷಿಯ ಪುಣ್ಯ ! ಅದು ನನಗೆ ದೊರಕೀತೆ? ಆ ಭಾಗ್ಯ ನನಗಿಲ್ಲ. ಆ ಸಂಪತ್ತು ನನಗಿಲ್ಲ. ನಾನು ಈ ಪಾತ್ರವನ್ನು ಇನ್ನು ಮೇಲೆ ಆಡುವುದು ಅವನಿಗೆ ಇಷ್ಟವಿಲ್ಲವೆಂದು ತೋರುತ್ತದೆ ತಮ್ಮಾ, ಯಾಕೆ ಇನ್ನೂ ತಡೆವಿತೋ ಈ ಜನುಮ.......!'

ಮಲ್ಲಮ್ಮ ಸಾವಿನ ಹಾಸಿಗೆಯ ಮೇಲೊರಗಿದ ಗಂಡನ ಕಾಲ ಬಳಿ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಮಲ್ಲಪ್ಪ ಮಾತನಾಡುವುದಕ್ಕೆ ಆಗದಂತಹ ಸ್ಥಿತಿಯಲ್ಲಿದ್ದುದರಿಂದ ಬರೀ ನೋಟದಿಂದ ತನ್ನ ಹೃದಯ ದೊಲವನ್ನು ಇಂತು ಸೂಚಿಸುತ್ತಿದ್ದನು ! ಸಾವಿನ ಕೈಯಲ್ಲಿ ಸಿಲುಕಿದ ಮುಪ್ಪನ್ನು ಕಂಡ ನನ್ನ ಎಳೆಯ ಮನಸ್ಸು ಚೇಳಿನಿಂದ ಕಡಿಸಿಕೊಂಡ ಹಸುಗೂಸಿನ ತೆರದಲ್ಲಿ 'ಅಪ್ಪೋ!' ಎಂದು ಕೂಗಿ ಕೂಗಿ ಕಣ್ಣೀರು ಹಾಕುತ್ತಿದ್ದಿತು !

ಮಲ್ಲಪ್ಪ ಇನ್ನು ಒಂದು ವಾರವನ್ನಾದರೂ ಕಳೆಯಬಾರದೆ? ಮುಂದಿನ ವಾರ ಹಿಂದೂ ದೇಶದಲ್ಲಿ ಸ್ವರ್ಗ ಇಳಿಯಲಿದೆ. ನಾಕವಾಸಿಗಳಿಗೆ ದೊರೆಯುವ ಚಿರಂತತೆಯು ಮಲ್ಲಪ್ಪನಿಗೂ ದೊರೆಯುವುದು. ಮಲ್ಲಪ್ಪ ಒಂದು ವಾರದವರೆಗಾದರೂ ನೀನು ಜೀವ ಹಿಡಿದುಕೊಂಡಿರಬೇಕು!

ಏನು ಹೇಳಿದರೂ ಆಗದು. ಇರುವಷ್ಟು ಕಾಲದಲ್ಲೇ ರಂಗಭೂಮಿಯ ನಟನೆ ಮುಗಿಯಲೇ ಬೇಕು! ಮಲ್ಲಪ್ಪನಿಗೆ ತನ್ನದೇ ಹಂಬಲ!

ಇವರ ಮುಂದೆ ಕಣ್ಣು ಮುಚ್ಚಬೇಕರೀ! ನಾನೊಲ್ಲರೀ ಇವರಿಲ್ಲದ ಬದುಕು ಭಾಗ್ಯ! ಮಲ್ಲಮ್ಮನಿಗೂ ಅವಳದೇ ಚಿಂತೆ!

ಹೊರವಾಗಿಲಿಂದ ಗಾಳಿ ಜೋರಾಗಿ ಬೀಸಿತು. ಮಲ್ಲಮ್ಮ ಹಿಡಿದುಕೊಂಡಿದ್ದ ಚಿಮಣಿಯ ಬೆಳಕು ಹೊಯ್ದಾಡಿತು. ಮಲ್ಲಪ್ಪ ಸಂಕಟದಿಂದ 'ಅಯ್ಯೋ' ಎಂದು ಕೂಗುವ ಹೊತ್ತಿಗೆ ಪಡುವಣ ದಿಗಂತದಲ್ಲಿ ಸೂರ್ಯ ಅಸ್ತಂಗತನಾಗಿದ್ದ; ಮೂಡಣ ದಿಕ್ಕಿನಲ್ಲಿ ಚಂದಿರನು ಮೂಡುತ್ತಲಿದ್ದನು!

* * *

ಆಗಸ್ಟ ಹದಿನೈದರ ಮಧ್ಯರಾತ್ರಿಯ ಬರವನ್ನೇ ಸಮಸ್ತ ಆಸೇತು ಹಿಮಾಚಲದವರೆಗಿನ ಭರತದ ದೇಶದ ಕುಲಕೋಟಿ ಕಣ್ಣಿನಲ್ಲಿ ಕಣ್ಣಿಟ್ಟು ಅವಲೋಕಿಸುತ್ತಿದ್ದಿತು. ಮಲ್ಲೂರ ಮಕ್ಕಳ ಸಂತಸವನ್ನೇನೆಂದು ಬೇರೆ ಬಣ್ಣಕೊಟ್ಟು ಹೇಳಲಿ ನಾನು!

ಬಸವನ ಗುಡಿಯ ಮುಂದೆ ತೆಂಗು ಕೌಂಗುಗಳ ತೋರಣ ಕಟ್ಟಿ ನಿಂತಿತ್ತು. ಬಾಳೆಯ ಬನಸಿಗಿ ಊರ ಮಧ್ಯದಲ್ಲಿಯೇ ಬೇರು ಬಿಟ್ಟು ನಿಂತ ಸುಂದರ ಜಾವ! ಜನ ಯಾವುದೋ ಉನ್ಮಾದದಲ್ಲಿಯೇ ಲೀನವಾಗಿ ಹೋಗಿದ್ದಾರೆ!

ಹುಡುಗರು ಕೇಕೆ ಹೊಡೆಯುತ್ತಿದ್ದಾರೆ. ಹಾಗೇಕೆ ಎಂದು ಕೇಳಿದರೆ ಅವರು ಸಮರ್ಪಕವಾದ ಉತ್ತರ ಹೇಳಲರಿಯರು. ದೇಶಕ್ಕೆ ಸ್ವಾತಂತ್ರ್ಯ ಬಂದಿದೆಯಂತೆ! ಮಧ್ಯರಾತ್ರಿಗೇ ಬಿಡುಗಡೆಯ ಸೂರ್ಯ ಉದಯವಾಗಲಿದ್ದಾನಂತೆ! ಮುದುಕಮ್ಮಗಳು ಹುಬ್ಬಿನ ಮೇಲೆ ಕೈ ಹಚ್ಚಿ ನಿಂತು ಆಗಸದ ಕಡೆಗೇ ನೋಡುತ್ತಲಿದ್ದರು. ಹನ್ನೆರಡು ಘಂಟೆ ಆಗಲು ಬಂದಿತ್ತೇ?

ಇನ್ನೂ ಎಷ್ಟು ಉಳಿದಿದೆ ಹನ್ನೆರಡು ಬಾರಿಸಲು? ಗಡಿಯಾರದ ಮುಳ್ಳು, ಗರಗರ ತಿರುಗಬಾರದೇನು ?

ಮಲ್ಲಪ್ಪ, ಏಳು ದಿನಗಳವರೆಗೂ ನೀನು ಜೀವ ಹಿಡಿದುಕೊಂಡು ನಿಂತೆ. ಇನ್ನರ್ಧ ತಾಸು ತಡೆ. ಮೂಬಣ್ಣದ ರಾಷ್ಟ್ರಧ್ವಜ ಬಾನಿಗೇರಲಿದೆ. ನೀನು ಸ್ವತಂತ್ರ ಹಿಂದೂ ದೇಶದ ಪ್ರಜೆಯಾಗಲು ಇನ್ನು ಬರೀ ಮುವ್ವತ್ತು ನಿಮಿಷಗಳ ಅಂತರವಿದೆ. ಜೀವ ಹಿಡಿದುಕೊ. ಮುನಿಯ ನಿಗ್ರಹ ಶಕ್ತಿಯನ್ನು ಸಾಧಿಸಿ ಮೊದಲ ಪ್ರಜೆಯಾಗುವ ಪುಣ್ಯವನ್ನು ಪಡೆದುಕೊ.

ಇಲ್ಲ, ಇಲ್ಲ! ಇನ್ನು ಅರ್ಧತಾಸಿನವರೆಗೂ ಮಲ್ಲಪ್ಪ ಬದುಕಲಾರ. ದೊಡ್ಡ ಜೀವ ಹಾರಿ ಹೋಗಿದೆ. ಸಂಕಟದಿಂದ ಹೋ ಎಂದು ಒರಲುವ ಅವನ ಪ್ರಾಣಪಕ್ಷಿ ಆ ನರದಿಂದ ಈ ನರದ ಮೇಲೆ ಈ ನರದಿಂದ ಇನ್ನೊಂದು ನರದ ಮೇಲೆ ಕುಳಿತು ಚಿಂವ್ ಚಿಂವ್ ಎಂದು ಒರಲುತ್ತ ದೇಹದ ಗೂಡನ್ನು ಬಿಟ್ಟು ಹಾರಿ ಹೋಗಲು ಸಿದ್ಧವಾಗಿದೆ. ಈಗೋ ಇನ್ನಷ್ಟು ಹೊತ್ತಿಗೋ ಮಲ್ಲಪ್ಪ ಹೊರಟು ಹೋಗಲಿದ್ದಾನೆ!

ಊರಿನ ಯಜಮಾನ. ಬಾಳಿಗೊಂದು ಶೃಂಗಾರವಾದವ. ಮಕ್ಕಳಿಗೊಂದು ಮುದ್ದಿನ ವಸ್ತುವಾಗಿದ್ದ ಮಲ್ಲಪ್ಪ ಮಲ್ಲೂರನ್ನು ಬಿಟ್ಟು ಹೋಗಲಿದ್ದಾನೆ! ಜನತೆಯ ರಸಪೂರ್ಣ ಜಾಣಿನಲ್ಲಿ ವಿಷ ಹೂಡಿ ನಿಂತ ಸಂಚು! ನಗೆ ನೋವು. ರಸ ವಿಷ, ಜನನ ಮರಣ....! ಅದೆಲ್ಲ ಬಾಳಿನ ಸಮಗ್ರ ಚಿತ್ರಕ್ಕೆ ಸಹಾಯ್ಯಕಾರಿ! ಇಂತಹ ಸಮಯದಲ್ಲಿ ಏನು ಮಾಡಬೇಕು ?

ಇನ್ನು ಬರೀ ಹದಿನೈದು ನಿಮಿಷಗಳು ಮಾತ್ರ ಉಳಿದವು! ಮಲ್ಲಪ್ಪ ಬದುಕಲಾರನೇನು ? ಇಲ್ಲ ಇಲ್ಲ ! ಇನ್ನೊಂದು ನಿಮಿಷವೂ ಬದುಕಲಾರ !

ಹುಚ್ಚಪ್ಪ! ನಾಡು ಇಷ್ಟು ಕಷ್ಟಪಟ್ಟಿದೆ! ದುಃಖದ ಸೇತುಬಂಧನವನ್ನೇ ನಿರ್ಮಿಸಿ ಸ್ವಾತಂತ್ರ್ಯ ದೇವಿಯನ್ನು ಮನೆಗೆ ಕರೆದ ತಂದ ಜಾವವನ್ನೇ ನೋಡಲಾರದೆ ಹೋಗುವನೇ? ಈಸುದಿನ ದುಃಖ ಪೂರ್ಣವಾದ ಗುಲಾಮಗಿರಿಯ ಬಾಳನ್ನು ನೀಗಿದವನು ಈ ಭರತದೇಶದ ದೀವಳಿಗೆಯ ಉತ್ಸವವನ್ನು ನೋಡಲಾರದೆ ಹೋಗುವನೇ? ಮಲ್ಲಪ್ಪ, ದೇವರಲ್ಲಿ ಬೇಡಿಕೊ! ಸ್ವತಂತ್ರ ಹಿಂದೂ ದೇಶದ ಮಣ್ಣಿನಲ್ಲಿ ಅಡಗಿಸುವ ಕೊಡುಗೆಯನ್ನು ಬೇಡಿಕೊ!

ಕುಂಬಾರ ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತ ಜನರಿಗೊಂದು ಚಿಂತೆ! ಗುಡಿಯ ಮುಂದೆ ಸ್ವಾತಂತ್ರ್ಯದ ಸ್ತಂಭವನ್ನು ನಿಲ್ಲಿಸಿ ರಾಷ್ಟ್ರಧ್ವಜವನ್ನು ಹಾರಿಸಲು ಸನ್ನದ್ಧರಾಗಿರುವ ಯುವಕರಿಗೊಂದು ಹಂಬಲ.

ಗಡಿಯಾರ ಟಿಕ್ ಟಿಕ್ ಎನ್ನುತ್ತಿತ್ತು! ಗಾಳಿ ಸುಯ್ ಎಂದು ಬೀಸುತ್ತಿತ್ತು. ಮಧ್ಯ ರಾತ್ರಿಯಲ್ಲಿ ಹಿಂದೂದೇಶದಲ್ಲಿ ನಡೆದ ಸಂದರ್ಭವನ್ನು ಬಿತ್ತರದ ಆಗಸ ಕಣ್ಣು ಬಿಟ್ಟು ನೋಡುತ್ತಲಿದ್ದಿತು!

ಬಂದಿತು ಬಂದಿತು ಸುಮುಹೂರ್ತ! ಏರಿಸಿ ಹಾರಿಸಿ ಭಾರತದ ಬಾವುಟ! ನಾಡಿನಲಿ ಮೆರೆಯಲಿ ಪಟ ಪಟ! ಗಾಳಿಯಲಿ ಹಾರಲಿ ಫಟ ಫಟ!

ದೇಗುಲದ ಗಂಟೆ ಜಾಗಟೆಗಳು ಮೊಳಗಿದವು. ನಗಾರಿ ನೌಬತ್ತುಗಳು ಕೂಗಿದವು ಕಾಳಿ ಹಿಡಿಯಿತು. ಬಂಧನದಿಂದ ಬಿಡುಗಡೆಗೆ, ಗುಲಾಮಗಿರಿಯಿಂದ ಸ್ವಾತಂತ್ರ್ಯದೆಡೆಗೆ, ದಾರಿದ್ರ್ಯದಿಂದ ಸಿರಿವಂತಿಕೆ ಯೆಡೆಗೆ, ಮೃತ್ಯುವಿನಿಂದ ಅಮೃತತ್ವಕ್ಕೆ ಹಿಂದೂದೇಶದ ಜನತೆ ಬಂದಿತೋ ಬಂದಿತು!

ದಿಲ್ಲಿಯ ಸರಕಾರೀ ಭುವನದಲ್ಲಿ ರಾಜೇಂದ್ರ ಪ್ರಸಾದರು, ಅವರ ಬಲಗಡೆ ನೆಹರು, ಆಚೆಗೆ ಸರದಾರ ಪಟೇಲರು, ನಮ್ಮ ನಾಯಕ ವರ್ಗವೆಲ್ಲ ಕುಳಿತುಕೊಂಡು ಭರತದೇಶದ ಸಂತಾನಕ್ಕೆ ಸ್ವಾತಂತ್ರ್ಯದ ಸಂದೇಶ ಹೇಳುತ್ತಿದ್ದರು!

ಹಿರೇಮಲ್ಲೂರಿನ ಬಾನಿನಲ್ಲಿ ಹಾರಾಡುತ್ತಲಿದ್ದ ರಾಷ್ಟ್ರಧ್ವಜ ಪಡಿಯಲ್ಲಿ ಯುವ ಜನಾಂಗ ಸೇರಿನಿಂತು ಪಣ ತೊಡುತ್ತಲಿದ್ದರು! ಇದು ನಮ್ಮ ಬಾವುಟ! ಇದಕ್ಕಾಗಿ ಸಾವು ಮಾಡುತ್ತೇವೆ; ಮಡಿಯುತ್ತೇವೆ!

ಮಲ್ಲಪ್ಪ, ಓ ಮಲ್ಲಪ್ಪ! ನೀನು ಹಿಂದೂದೇಶದ ಪ್ರಜೆಯಾದೆ; ಮೊದಲ ಪ್ರಜೆಯಾದೆ!

ಮೂಗಿನ ಮೇಲೆ ನಟ್ಟ ದೃಷ್ಟಿಯನ್ನಿಟ್ಟುಕೊಂಡು ಧ್ಯಾನಾ

ಸಕ್ತನಾಗಿ ಹೋಗಿದ್ದ ಮಲ್ಲಪ್ಪನು ಎಡಗಡೆಯಿಂದ ಬಲಕ್ಕೆ ಹೊರಳಿದನು. ಗೋಣು ಕಳಚಿತು. ಅವನ ಮಡದಿ ಮಲ್ಲಮ್ಮ ಬಾಯಲ್ಲಿ ನೀರು ಬಿಟ್ಟಳು!

ಅಳಬೇಡ ಮಲ್ಲಮ್ಮ! ಉತ್ತರಾಯಣದಲ್ಲಿದ್ದಾನೆ, ನಿನ್ನ ಗಂಡ! ಅವನು ಅಮರ ಪ್ರಜೆಯಾದ!

ಅಮರ ಪ್ರಜೆಯೆ! ಅಷ್ಟು ಮಾತ್ರವೆ? ಅದಕ್ಕೂ ಹೆಚ್ಚಿಗೆ. ಆವನು ಹಿಂದೂ ದೇಶದ ಮೊದಲ ಋಷಿ. ಋಷಿಯು ಶ್ರೇಯವನ್ನು ಮರಣದಲ್ಲಿ ನೋಡಬೇಕು! ಅಂತ ಮರಣ ಏನು ಕೊಟ್ಟರೆ ಬಂದೀತು!

ಮಲ್ಲಪ್ಪನನ್ನು ಬೀಳ್ಕೊಡಲು ಬಂದ ಮಲ್ಲೂರ ಜನತೆ ಮಾತ ನಾಡುತ್ತಲಿತ್ತು. ಮಕ್ಕಳು ಮೌನದಿಂದ ಜನ ಮಾತನಾಡುವುದನ್ನೇ ಕೇಳುತ್ತಲಿದ್ದರು. ಅಂದು ಮಲ್ಲೂರಿಗೇ ಮಲ್ಲೂರೇ ಎಚ್ಚತ್ತು ಋಷಿಯನ್ನು ಬೀಳ್ಕೊಡಲು ಬಂದಿತ್ತು! ಮಲ್ಲಪ್ಪನ ದಾರಿ ಋಷಿಯ ಮಾರ್ಗ. ನಮಗೆ ಆ ದಾರಿ ಏನು ಮಾಡಿದರೆ ಸಿಕ್ಕೀತು ಎಂದು ಕಣ್ಣೀರು ಹಾಕುತ್ತ ಮುಖ ಕೆಳಗೆ ಮಾಡಿಕೊಂಡು ಮಾದಿ ಹಳ್ಳ ದಾಟಿ ಮಸಣದೆಡೆಗೆ ನಡೆದವರ ಚಿತ್ರ ಮರೆಯಲಾಗದ ಚಿತ್ರ!



# ಕಲ್ಪನಾ ಗ್ರಂಥ ಮಾಲೆಯ ಯೋಜನೆ



ಸಂಪಾದಕರು

**ಹಿರೇಮಲ್ಲೂರ ಈಶ್ವರನ್, ಎಂ. ಎ.**

ನಾಡಿನ ಬೌದ್ಧಿಕ ಮತ್ತು ಸಾಂಸ್ಕೃತಿಕ ಪ್ರಗತಿಯೇ ಕಲ್ಪನಾ ಗ್ರಂಥ ಮಾಲೆಯ ಗುರಿ. ಲಲಿತ ಸಾಹಿತ್ಯ, ಬೌದ್ಧಿಕ ಸಾಹಿತ್ಯ-ರಂಜನೆ ಬೋಧನೆ-ಜನಮನದ ವಿಕಾಸಕ್ಕಾಗಿ ಸಂಸ್ಕಾರಕ್ಕಾಗಿ ಯಾವ ಸಾಹಿತ್ಯವನ್ನೆಲ್ಲ ಓದವಿಸಬೇಕೊ ಅದನ್ನೆಲ್ಲ ಹುಡುಕಿ ತಂದು 'ಕಲ್ಪನಾ'ದಲ್ಲಿ ಪ್ರಕಟಿಸುವ ಸಂಕಲ್ಪವಿದೆ.

ಸಂಪಾದಕ ಮಂಡಲದ ಮಿರ್ಜಿ ಅಣ್ಣಾರಾಯರು ಧಾರವಾಡದ ಓದನ್ನು ತೀರಿಸಿಕೊಂಡು ಸೇಡಬಾಳದಲ್ಲಿ ನೆಲಸಿದ್ದಾರೆ. ಅಲ್ಲಿಯೇ ಇದ್ದುಕೊಂಡು ಇನ್ನು ಮೇಲಿಂದ ಕಲ್ಪನಾ ಪ್ರಕಟನೆಗಳ ವಿಸ್ತಾರವಾದ ಹೊಳವುಗಳನ್ನು ಹಾಕುವರು. ೫೦ ರೂ. ಸಹಾಯ್ಯಕರಾಗಿ, ೧೫೦ ರೂ. ಪೋಷಕರಾಗಿ, ೨೫೦ ರೂ. ಆಶ್ರಯದಾತರಾಗಿ ಉದಾರಮತಿಗಳಾದ ಕನ್ನಡಿಗರು ಕನ್ನಡನಾಡಿನ ಹೆಮ್ಮೆಯ ಸುಂದರ ಗ್ರಂಥಮಾಲೆಗೆ ನೆರವಾಗಬೇಕೆಂದು ಬಿನ್ನಹ.

ಹೊಸ ವರುಷದಿಂದ ಚಂದಾ ಹಣದ ಮಿತಿ ಮಿಕ್ಕಿ ಪ್ರಕಟನೆಗಳನ್ನು ಹೊರಡಿಸುತ್ತಿರುವುದರಿಂದ ವಾರ್ಷಿಕ ವಂತಿಗೆ ಇಂದಿನಿಂದ ನಿಲ್ಲಿಸಿದೆ. ಸಹಾಯಕರಿಗೆ ಐದು ವರುಷದವರೆಗಿನ ಪ್ರಕಟನೆಗಳನ್ನು, ಉಳಿದವರಿಗೆ ಮಾಲೆಯ ಎಲ್ಲ ಪ್ರಕಟನೆಗಳನ್ನು ಕೊಡಲಾಗುವುದು.

## ನಮ್ಮ ಪ್ರಕಟನೆಗಳು ದೊರೆಯುವ ಸ್ಥಳಗಳು :

ಸಮಾಜ ಪುಸ್ತಕಾಲಯ, ಧಾರವಾಡ
ಮನೋಹರ ಗ್ರಂಥ ಭಾಂಡಾರ, ಧಾರವಾಡ
ಎಫ್. ಜಿ. ನೀರಲಕಟ್ಟಿ, ಧಾರವಾಡ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ
ಕನ್ನಡ ಪುಸ್ತಕಾಲಯ, ಬೆಳಗಾವಿ
ಸತ್ಯ ಶೋಧನ ಪುಸ್ತಕ ಭಾಂಡಾರ, ಕೋಟೆ, ಬೆಂಗಳೂರು
ವ್ಹಿ. ಆರ್. ಪ್ರಭು, ಕ್ಯಾನರಾ ಬುಕ್ ಸೆಲರ್ಸ, ಮುಂಬಯಿ